


ಕಾಯಕವೇ ಕೈಲಾಸ

# ಸಿದ್ಧಗಂಗಾ






ಸಂಪುಟ : ೫೩ | ಆಗಸ್ಟ್ ೨೦೧೭ | ಸಂಚಿಕೆ : ೦೮


## ಸ್ವಾತಂತ್ರ್ಯ ದಿನಾಚರಣೆಯ ಹಾರ್ದಿಕ ಶುಭಾಶಯಗಳು



ಬಿರ್ಲಾ ಸಭಾಂಗಣದಲ್ಲಿ ಶ್ರೀ ಮರಿಬಸಪ್ಪ ಅವರಿಗೆ ೬೦ ವರ್ಷ ತುಂಬಿದ ಶುಭ ಸಂದರ್ಭದಲ್ಲಿ ಏರ್ಪಡಿಸಲಾಗಿದ್ದ ಅಭಿನಂದನೆ ಹಾಗೂ ಗ್ರಂಥ ಲೋಕಾರ್ಪಣೆ ಸಮಾರಂಭವನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಪೂಜ್ಯ ಶ್ರೀ ಶ್ರೀ ಶಿವಾನಂದ ಶಿವಾಚಾರ್ಯ ಸ್ವಾಮಿಗಳು, ಶ್ರೀ ಶಂಕರ ಬಿದರಿ, ಶ್ರೀ ಜಿ.ಎಸ್. ಬಸವರಾಜು, ಡಾ. ಎಂ. ಚಿದಾನಂದಮೂರ್ತಿ, ಡಾ. ಸಿ. ಸೋಮಶೇಖರ್ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ಶ್ರೀಮಠದ ವಿದ್ಯಾರ್ಥಿಗಳಿಗೆ ಉಚಿತವಾಗಿ ನೋಟ್‌ಪುಸ್ತಕಗಳನ್ನು ವಿತರಣೆ ಮಾಡಿದ ಶ್ರೀ ರಾಜಕುಮಾರ್ ಪೈ ಕುಟುಂಬದವರನ್ನು ಪರಮಪೂಜ್ಯ ಶ್ರೀ ಶ್ರೀಗಳವರು ಸನ್ಮಾನಿಸಿ ಆಶೀರ್ವದಿಸಿದರು.




ಶ್ರೀ ಪೈ ಇಂಟರ್‌ನ್ಯಾಷನಲ್ ಸಂಸ್ಥೆ ವತಿಯಿಂದ ವಿದ್ಯಾರ್ಥಿಗಳಿಗೆ ಉಚಿತ ನೋಟ್‌ಪುಸ್ತಕಗಳನ್ನು ವಿತರಿಸುವ ಕಾರ್ಯಕ್ರಮವನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ಸಾನ್ನಿಧ್ಯದಲ್ಲಿ ಸಾಂಕೇತಿಕವಾಗಿ ವಿತರಿಸಿ ಚಾಲನೆ ನೀಡಲಾಯಿತು. ಈ ಸಂದರ್ಭದಲ್ಲಿ ಪೈ ಕುಟುಂಬದವರು, ಕೊಡ್ಲಿಮಠದ ಹಾಗೂ ಅರಮೇರಿಮಠದ ಪೂಜ್ಯ ಶ್ರೀ ಶ್ರೀಗಳವರು ಉಪಸ್ಥಿತರಿದ್ದರು.




ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು

ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಉಪಾಧ್ಯಕ್ಷರು

ಸಂಪಾದಕರು :
**ಹೆಚ್.ವಿ. ವೀರಭದ್ರಯ್ಯ**

ಸಹ ಸಂಪಾದಕರು :
**ಎಚ್.ಎಸ್. ಸಿದ್ಧಗಂಗಪ್ಪ**

ಪತ್ರಿಕಾ ನಿರ್ವಹಣಾ ಸಮಿತಿ :
**ಎಂ. ರೇಣುಕಾರಾಧ್ಯ**
**ಆರ್.ಎಸ್. ಮಲ್ಲೇಶಪ್ಪ**
**ಕೆ.ಬಿ. ಶಿವಶಂಕರಯ್ಯ**
**ಸಿ. ಕುಮಾರಸ್ವಾಮಿ**

ಪ್ರಕಾಶನ :
**ಹಳೆಯ ವಿದ್ಯಾರ್ಥಿಗಳ ಸಂಘ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು :
**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್ ಮುದ್ರಣಾಲಯ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು-572 104.

ವಿಳಾಸ :
**"ಸಂಪಾದಕರು"**
**'ಸಿದ್ಧಗಂಗಾ' ಮಾಸಪತ್ರಿಕೆ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572 104
ದೂ: 0816-2282322.

ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಪೆನು ಬಸವೇಶ**

# ಸಿದ್ಧಗಂಗಾ

**ಸಂಪುಟ : ೫೩ ಆಗಸ್ಟ್ ೨೦೧೭ ಸಂಚಿಕೆ : ೦೮**

## ಒಳಪುಟಗಳಲ್ಲಿ ..................



**ಚಂದಾ ವಿವರ : ವಾರ್ಷಿಕ ಚಂದಾ ರೂ. 200/-**
**ಆಜೀವ ಸದಸ್ಯತ್ವ ರೂ. 1500/- ಬಿಡಿ ಪ್ರತಿ ರೂ. 20.00**

# ಸ್ವಾತಂತ್ರ್ಯ - ಕರ್ತವ್ಯ ಪ್ರಜ್ಞೆ

ಸ್ವಾತಂತ್ರ್ಯ ಬಂದದ್ದು ೧೯೪೭ರ ಆಗಸ್ಟ್ ೧೫ರಂದು ಮಹಾತ್ಮಗಾಂಧೀಜಿಯವರ ಸತ್ಯಾಗ್ರಹದ ಫಲ. ಅನೇಕ ದೇಶಭಕ್ತರ ಸಹಕಾರ. ವಿಶ್ವದಲ್ಲಿ ತಲೆ ಎತ್ತಿ ಓಡಾಡುವ, ಮಾತನಾಡುವ ಅವಕಾಶ ಲಭ್ಯ. ಭಾರತವನ್ನು ಕಟ್ಟಬೇಕು, ಯಾರು ಕಟ್ಟಬೇಕು ? ಈ ಪ್ರಶ್ನೆಯನ್ನು ಪ್ರತಿಯೊಬ್ಬ ಭಾರತೀಯನೂ ತನಗೆ ತಾನೇ ಪ್ರಶ್ನಿಸಿಕೊಳ್ಳಬೇಕಾದ ಮಾತು. ರಾಷ್ಟ್ರನಿರ್ಮಾಣದಲ್ಲಿ ನನ್ನ ಪಾತ್ರವೇನು ? ಎಂದು ಚಿಂತಿಸಬೇಕು. ಕೇವಲ ಚಿಂತಿಸಿದರೆ ಸಾಲದು ತನ್ನ ಚಿಂತನೆಯನ್ನು ಕಾರ್ಯಗತಕ್ಕೆ ತರಬೇಕಾದುದಾಗಿದೆ. ಪ್ರಜಾಪ್ರಭುತ್ವವೆಂದರೆ ನಮ್ಮನ್ನು ನಾವು ಆಳಿಕೊಳ್ಳುವುದೆಂದರ್ಥ ತಾನೆ ? 'ನಿನ್ನೆ ಸತ್ತಿಹುದಿನ್ನು ನಾಳೆ ಹುಟ್ಟದೆ ಇಹುದು ಅದನು ನೆನೆದಳುವುದೇಕೆ ? ಎಂದಾಗಬಾರದು. ನಾವು ಹೇಗಿದ್ದೆವು ? ಈಗ ಹೇಗಿದ್ದೇವೆ ? ಮುಂದಿನ ದಾರಿ ಯಾವುದು ? ಎಂಬ ಚಿಂತೆ ಎಲ್ಲರದಾಗಬೇಕು. ರಾಷ್ಟ್ರ ನಮಗೆ ಏನು ಕೊಟ್ಟಿತು ? ಎಂಬುದಕ್ಕಿಂತ ರಾಷ್ಟ್ರಕ್ಕೆ ನಾವು ಕೊಟ್ಟಿದ್ದಾದರೂ ಏನು ? ಎಂದು ನಮಗೆ ನಾವೇ ಕೇಳಿಕೊಂಡು ಉತ್ತರ ಕಂಡುಕೊಳ್ಳಬೇಕು. ಎಪ್ಪತ್ತೊಂದು ವರ್ಷಗಳನ್ನು ಕಳೆದಿದ್ದೇವಲ್ಲ ? ಒಮ್ಮೆ ತಿರುಗುನೋಡಿ ಮುಂದಡಿ ಇಡಬೇಕು. ಇಲ್ಲಿ ಅವರಿವರು ಎನ್ನಬೇಕಿಲ್ಲ; ತಾನೇನು ? ತನ್ನ ಕರ್ತವ್ಯವೇನು ? ಎಂದು ಪ್ರಶ್ನಿಸಿಕೊಳ್ಳಬೇಕು. 'ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸಿ' ಎಂಬ ಸುಭಾಷಿತವನ್ನು ನಿತ್ಯ ಮನನ ಮಾಡಿಕೊಳ್ಳುವುದಾಗಬೇಕು. ಪ್ರತಿಯೊಬ್ಬ ಭಾರತೀಯನೂ ಪ್ರಮಾಣ ವಚನ ಸ್ವೀಕರಿಸುವ ದಿನವೇ ಆಗಸ್ಟ್ ೧೫ ಆಗಿದೆ.

ಪ್ರೊ ಹೆಚ್.ವಿ. ವೀರಭದ್ರಯ್ಯ
ಸಂಪಾದಕರು







# ಶಿಕ್ಷಣ : ಬಾಳನ್ನು ಬೆಳಗಿನ ಮಂಗಳಪಥ

ಶಿಕ್ಷಣದ ವ್ಯಕ್ತಿಯ ವಿಕಾಸದ ಸೋಪಾನ. ಮನದ ಮೈಲಿಗೆ ಕಳೆವ ಅತ್ಯುತ್ತಮ ಸಾಧನ. ಜಗತ್ತನ್ನು ಸುಂದರಗೊಳಿಸಲು ಇರುವ ಮಾಧ್ಯಮ. ಅಕ್ಷರಸ್ಥರಾಗಿ, ಅಹಂಕಾರಿಗಳಾಗದೆ ನೀತಿ ಸಂಪನ್ನರಾಗಿ ಸಕಲ ಜೀವಿಗಳೊಂದಿಗೆ ಸಹ್ಯ ಬಾಳುವೆ ಮಾಡುವಂತೆ ಶಿಕ್ಷಣ ಮಾರ್ಗದರ್ಶಿಯಾಗಬೇಕು. ಹೆಣ್ಣು-ಗಂಡು ಮೇಲು-ಕೀಳು, ಹಿರಿಯ-ಕಿರಿಯ, ವಿಪ್ರ-ಅಂತ್ಯಜ, ಹಳ್ಳಿಗ-ಪಟ್ಟಣಿಗ ಎಂಬ ಭೇದವಿಲ್ಲ ಜ್ಞಾನಕ್ಕೆ. ಮನುಕುಲದ ದಿವ್ಯಾಭರಣವಾದ ಜ್ಞಾನ ಸೃಜನಶೀಲವಾದುದು. ನಿತ್ಯನೂತನವಾದುದು. ಅನುಭವಕ್ಕೆ ಅಭಿವ್ಯಕ್ತಿ ನೀಡುವ ಸಾಮರ್ಥ್ಯವುಳ್ಳದ್ದು. ಸೃಜನ ಪ್ರತಿಭೆ ಪ್ರಕಾಶಿಸಲು ಪ್ರೋತ್ಸಾಹ ಮುಖ್ಯ. ಅವಕಾಶ ಅಗತ್ಯ ಎಳೆಯ ಹೃದಯಗಳಲ್ಲಿ ಸುಪ್ತವಾಗಿರುವ ಶಕ್ತಿ ಶಿವನನ್ನು ಅನಾವರಣಗೊಳಿಸುವ ಪ್ರಯತ್ನ ಪ್ರಶಂಸನೀಯ. ಕತ್ತಲಿನಿಂದ ಬೆಳಕಿನೆಡೆಗೆ ಕೊಂಡೊಯ್ಯುವ ಶಿವಪಥ ಶಿಕ್ಷಣ. ಮಾನವೀಯತೆಯನ್ನು ಬಿತ್ತುವ, ಬೆಳೆಯುವ ರಾಜಮಾರ್ಗ. ಹಸಿದ ಹೊಟ್ಟೆಗೆ ಅನ್ನ ನೀಡುವುದನ್ನು ಕಲಿಸುವ, ಬಿಸಿಲಲ್ಲಿದ್ದವರನ್ನು ನೆರಳಿಗೆ ಕರೆಯುವ, ಬಿದ್ದವರನ್ನು ಮೇಲೆತ್ತುವ, ಕುರುಡನಿಗೆ ಕೈಹಿಡಿದು ಮುನ್ನಡೆಸುವ, ಕುಂಟನನ್ನು ಹೆಗಲಲ್ಲಿ ಹೊತ್ತು ನಡೆಯುವ, ಬೀಳಲಿರುವವರನ್ನು ಆತುಕೊಳ್ಳುವ ವಿಧಾನವನ್ನು ಕಲಿಸಿಕೊಡುವ ಶಿಕ್ಷಣ ಕೇವಲ ಅಕ್ಷರ ಜ್ಞಾನ ನೀಡುವುದಲ್ಲ. ಮಾನವತೆ ತುಂಬಿದ ಬಾಳನ್ನು ಬೆಳಗಿಸುವ ಮಂಗಳಪಥ.

* * *

ಜ್ಞಾನಾರ್ಜನೆ ಜೀವನದಲ್ಲಿ ಮುಖ್ಯವಾದ ತತ್ತ್ವ, ಧ್ಯೇಯ, ಗುರಿಯಾಗಬೇಕು. ಜೀವನ ಸಾರ್ಥಕವಾಗಬೇಕಾಗದರೆ ಜ್ಞಾನವೇ ಮುಖ್ಯವಾದ ಸಾಧನವಾದ್ದರಿಂದ, ಆ ಜ್ಞಾನವನ್ನು ಸಂಪಾದನೆ ಮಾಡುವ ಬಹುಮುಖ್ಯ ಕಾಲ ಬಾಲ್ಯಾವಸ್ಥೆ. ವಿದ್ಯಾರ್ಥಿಗಳ ಮುಖ್ಯವಾದ ಗುರಿ ಜ್ಞಾನಾರ್ಜನೆ ಮಾಡುವುದು. ಜಡತ್ವ ಹೋಗಬೇಕು. ಆಲಸ್ಯ ಹೋಗಬೇಕು. ಅಜ್ಞಾನ ದೂರವಾಗಬೇಕು.

## ಶ್ರೀ ಸಿದ್ಧಲಿಂಗೇಶ್ವರ ವಚನ



*ನಡುಮನೆಯ ಲಾಡು ಸಿಂಗಳೀಕನ*
*ಒಂದು ಉಡು ನುಂಗಿಪ್ಪದ ಕಂಡು*
*ಕಡೆಯಲಿರ್ದ ಕಾಳಲದೇವಿ ನಗುತ್ತಿದ್ದಾಳೆ ನೋಡಾ*
*ನಡುಮಧ್ಯದಲ್ಲಿ ನಕ್ಷತ್ರ ಉದಯವಾಗಲು*
*ಉಡು ಸಿಂಗಳೀಕ ಮಡಿದು, ಕಡೆಯಲಿರ್ದ*
*ಕಾಳಲದೇವಿ ಕೆಡೆಮುರಿದೋಡಿದಳು ನೋಡಾ*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ*

ನಡುಮನೆಯಲ್ಲಿ - ಸ್ಥೂಲ ಕಾರಣವೆರಡಕ್ಕೆ ಮಧ್ಯಸ್ಥವಾದ ಸೂಕ್ಷ್ಮತನುವೆಂಬ ಮಂದಿರದಲ್ಲಿ, ಆಡುವ - ವಿನೋದಿಸುವ, ಸಿಂಗಳೀಕನ-ಮನೋಮರ್ಕಟನ ಒಂದು ಉಡು ನುಂಗಿದುದ ಕಂಡು, ಒಂದು ಉಡು - ದುರ್ಭಾವವೆಂಬ ಉಡುವು, ನುಂಗಿದ್ದುದ ಕಂಡು - ಅವಗ್ರಾಹಿಸಿದಂಥಾದ್ದನ್ನು ನೋಡಿ, ಕಡೆಯಲ್ಲಿರ್ದ- ಶಿವತತ್ವಕ್ಕೆ ವಿಲಕ್ಷಣವಾಗಿರ್ದ, ಕಾಳಲದೇವಿ- ಅಜ್ಞಾನ ಅಹಂಕಾರ ಸ್ವರೂಪವಾದ ಮಾಯಾಶಕ್ತಿಯು, ನಗುತ್ತಿದ್ದಾಳ- ಗಹಗಹಿಸುತ್ತಿರ್ಪಳು, ನೋಡಾ-ಕಂಡಾ, ನಡುಮಧ್ಯದಲ್ಲಿ-ದೇಹದಂತರಂಗದಲ್ಲಿ, ನಕ್ಷತ್ರ ಉದಯವಾಗಲು, ನಕ್ಷತ್ರ-ಚಿತ್ರಕಾಶ ಜ್ಞಾನವು, ಉದಯವಾಗಲು-ಉತ್ಪತ್ಯವಾಗಲು, ಉಡು-ದುರ್ಭಾವವೆಂಬ ಉಡುವು, ಸಿಂಗಳೀಕನು-ಮನೋಮರ್ಕಟನು, ಮಡಿದು - ನಿಷ್ಪತ್ತಿಯಾಗಿ, ಕಡೆಯಲ್ಲಿರ್ದ - ಶಿವತತ್ವಕ್ಕೆ ವಿಲಕ್ಷಣವಾಗಿರ್ದ, ಕಾಳಲದೇವೂ-ಅಜ್ಞಾನ ಅಹಂಕಾರ ಸ್ವರೂಪವಾದ ಮಾಯಾಶಕ್ತಿಯು, ಕೆಡೆಮುರಿದು-ಕಣ್ಣು ಮುರಿದು, ಓಡಿದಳು-ಪಲಾಯನವಾದಳು, ನೋಡಾ-ಕಂಡಾ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

*(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು- ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)*

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಆಲಬೇಲವಾದೆ ತೇಗಹೊನ್ನೆಯಾದೆ
ಶ್ರೀ ಬಿಲ್ವ ನೀನಾದೆ ಶ್ರೀಗುರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಮತೆಯ ಹೂವಾದೆ ಅರಿವಿನ ಅರಳಿಯಾದೆ
ಅನುಭಾವದ ಕದಳಿ ಸಿರಿಯಾದೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲಕ್ಷದೀಪವ ಹೊತ್ತಿಸಿ ಪೊರೆದಿರುವೆ
ಅಕ್ಷಯ ದಾಸೋಹ ನಡೆಸಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿತ್ಯ ದೀಪಾವಳಿ ನಿನ್ನ ಶಿವಚರಣದಲಿ
ಸತ್ಯ ಶಿವಸುಂದರ ದೀಪವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶತವರುಷ ತುಂಬಿರುವ ಶಕ ಹರುಷ ತಂದಿರುವ
ಶಕಪುರುಷ ಪುಣ್ಯಸಿರಿರೂಪ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶ್ರೀಗಂಧ ನೀನಾದೆ ಸಿಹಿಹಲಸು ನೀನಾದೆ
ರಸತುಂಬಿ ಬಿರಿದ ದಾಳಿಂಬೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹೂವಿನೊಳು ಕಂಪಾಗಿ ಹಣ್ಣಿನೊಳು ತಂಪಾಗಿ
ತೆಂಗಿನೊಳು ಸಿಹಿಯಾಗಿ ತೋರುತಿಹ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಇಷ್ಟಲಿಂಗಪೂಜೆ ಅಷ್ಟಷಷ್ಠಿ ತೀರ್ಥ
ಕ್ಷೇತ್ರಕೂ ಮಿಗಿಲೆಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶರಣನಿಗೆ ಸಾವಿರದು ಶರಣನು ಸಾಯನು
ಮರಣವೆ ಮಹಾನವಮಿ ತಿಳಿಯೆಂದೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಉಂಡು ಉಪವಾಸಿಯು ಬಳಸಿ ಬ್ರಹ್ಮಚಾರಿ
ಕಮಲದೆಲೆ ಮೇಲಿನ ಹನಿ ಶರಣ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

**- ಹೆಚ್.ವಿ. ವೀರಭದ್ರಯ್ಯ**







# ಬರಿಮಾಡ ಉರಿಯಿತ್ತು

**- ಶ್ರೀ ಸಿದ್ಧೇಶ್ವರ ಸ್ವಾಮಿಗಳು ***

**ನಾ**ವು ಬದುಕುವ ಈ ಜಗತ್ತಿನೊಳಗೆ ಅತ್ಯಂತ ಆಕರ್ಷಕವಾದುವುಗಳು ವಿಷಯಗಳು. ಕಿವಿ, ಕಣ್ಣು, ಮೈ, ನಾಲಿಗೆ, ನಾಸಿಕಕ್ಕೆ ಗೊತ್ತಾಗುವಂತಹ ವಿಷಯಗಳು ಈ ಜಗತ್ತಿನೊಳಗೆಲ್ಲಾ ಹರಡಿವೆ. ವಿಷಯಗಳಂತೆ ಭಗವಂತ ಕಂಡಿದ್ದರೆ ಈ ಶಾಸ್ತ್ರಗಳ ಅವಶ್ಯಕತೆ ಇರಲಿಲ್ಲ. ಸಂತರು, ಮಹಂತರು ಜಗತ್ತಿಗೆ ಇಷ್ಟು ಉಪದೇಶಿಸುವ ಪ್ರಶ್ನೆ ಬರುತ್ತಿರಲಿಲ್ಲ. ವಿಷಯಗಳು ಎಷ್ಟು ಎದ್ದು ಕಾಣಿಸುತ್ತವೆ ಅಷ್ಟು ಭಗವಂತ ಸ್ಪಷ್ಟವಾಗಿ ಕಣ್ಣೆದುರಿಗೆ ಗೋಚರವಾಗಿದ್ದರೆ, ವಿಷಯಗಳು ಮನಸ್ಸನ್ನು ಹೇಗೆ ತುಂಬಿಕೊಂಡಿವೆ ಹಾಗೆ ಭಗವಂತ ತುಂಬಿಕೊಂಡಿದ್ದರೆ ನಮ್ಮ ಜೀವನ ಹೀಗೆ ಇರುತ್ತಿರಲಿಲ್ಲ. ಅಸತ್ಯವು ಮಾತಿನೊಳಗೆ ಪ್ರವೇಶವಾಗುತ್ತಿರಲಿಲ್ಲ. ಅಸತ್ಯವು ಭಾವವನ್ನು ವ್ಯಾಪಿಸುತ್ತಿರಲಿಲ್ಲ. ಅಸತ್ಯವು ವಿಚಾರಗಳಲ್ಲಿ ಹರವಿಕೊಳ್ಳುತ್ತಿರಲಿಲ್ಲ. ನೂರು ವರ್ಷದ ಬದುಕಿನಲ್ಲಿ ಈ ವಿಷಯ ಬಿಟ್ಟು ಬೇರೇನೂ ಕಾಣುವುದೇ ಇಲ್ಲ.

**'ವಿಷಯಾಃ ವಿನಿವರ್ತಂತೇ'** - ವಿಷಯಗಳು ದೂರಾಗದೆ ಭಗವತ್ ಭಾವ ಬರುವುದಿಲ್ಲ. ಭಗವತ್ ಭಾವ ಬರದೆ ವಿಷಯಗಳು ದೂರಾಗವು. ಎಂತಹ ವಿಚಿತ್ರ! ಸತ್ಯ ಗೊತ್ತಾಗದೆ ಇದ್ದರೆ ಅಸತ್ಯದ ಪ್ರಭಾವ ಕಡಿಮೆಯಾಗದು. ಅಸತ್ಯದ ಪ್ರಭಾವ ಇರುವವರೆಗೆ ಸತ್ಯದ ದರ್ಶನ ಆಗದು. ಮನುಷ್ಯ ಕೆಳಗೆಯೇ ನೋಡುತ್ತಾ ಇರುವವರೆಗೆ ಆಕಾಶ ಇದೆ ಎನ್ನುವುದು ಹೇಗೆ ಕಲ್ಪನೆಗೆ ಬಂದೀತು? ಆ ಭವ್ಯ ಆಕಾಶ ಕಾಣದೆ ಇದ್ದರೆ ಕೆಳಗೆ ನೋಡುವುದು ಹೇಗೆ ನಿಂತೀತು? ಇದೆಲ್ಲಾ ಬಗೆಹರಿಯದ ಕೋಡಿ.

ಇಲ್ಲೊಂದು ಪುಷ್ಪ ಇದೆ ಎನ್ನುವುದರ ಬಗ್ಗೆ ಸಂದೇಹ ಯಾರಿಗೂ ಇಲ್ಲ. ಆದ್ದರಿಂದ ಆ ವಿಷಯದಲ್ಲಿ ಪ್ರಶ್ನೆಗಳೇ ಏಳುವುದಿಲ್ಲ. ಆದರೆ ಭಗವಂತನ ವಿಷಯದಲ್ಲಿ ಎಷ್ಟು ಪ್ರಶ್ನೆ? ಎಷ್ಟು ಸಮಸ್ಯೆ? ಸಾವಿರ ಸಾವಿರ ವರ್ಷಗಳಿಂದ ಪ್ರಶ್ನೆಗಳನ್ನು ಕೇಳುತ್ತಲೇ ಇದ್ದಾರೆ. ಹೇಳುವವರು ಹೇಳುತ್ತಲೇ ಇದ್ದಾರೆ. ಕೇಳುವವರಿಗೂ ಸಮಾಧಾನ ಆಗಿಲ್ಲ; ಹೇಳಿದವರಿಗೂ ಹೇಳಿ ಮುಗಿಯಿತು ಎಂದು ಅನ್ನಿಸಿಲ್ಲ. ಏಕೆ ಹೀಗೆ? ಮುಖ್ಯ ಕಾರಣ ವಿಷಯ ಮಗ್ನತೆ. ಬೇರೆಡೆ ಕ್ಷಣ ಕೂಡ ಲಕ್ಷ್ಯ ಹರಿಸದಷ್ಟು ನಿಮಗ್ನತೆ !

*ಬಾಲಸ್ತಾವತ್ ಕ್ರೀಡಾಸಕ್ತಃ ತರುಣಸ್ತಾವತ್ ತರುಣೀರಕ್ತಃ*
*ವೃದಸ್ತಾವತ್ ಚಿಂತಾಮಗ್ನಃ ಪರೇ ಬ್ರಹ್ಮಣಿ ಕೋಽಪಿ ನ ಲಗ್ನಃ*

ಭಾರತ ದೇಶದ ತುಂಬ ಅದ್ವೈತದ ಭಾನುವಾಗಿ ಸಂಚರಿಸಿ ಬ್ರಹ್ಮದ ಬೆಳಕನ್ನು ಹರಡಿದರು ಶಂಕರರು. ಆದರೆ ಎಷ್ಟು ಜನ ಆ ಬೆಳಕಿನತ್ತ ಗಮನ ಹರಿಸಿದರು? ಯಾರೂ ಇಲ್ಲ ಎನ್ನುತ್ತಾರೆ ಶಂಕರರು. ''ಬಾಲಕರಿಗೆ ಹೇಳಿದೆ; ಅವರು ಕ್ರೀಡಾಸಕ್ತರಾಗಿದ್ದರು. ಯುವಕರಿಗೆ ಹೇಳಿದೆ; ಅವರು ಸಂಸಾರಾಸಕ್ತರಾಗಿದ್ದರು. ವೃದರಿಗೆ ಹೇಳಿದೆ; ಅವರು ಚಿಂತಾಮಗ್ನರಾಗಿದ್ದರು. ನನ್ನ ಮಾತನ್ನು ಯಾರೂ ಕಿವಿಗೆ ಹಾಕಿಕೊಳ್ಳಲಿಲ್ಲ. ಬ್ರಹ್ಮ ಸತ್ಯವನ್ನು ಅರಿಯುವಲ್ಲಿ ಆಸಕ್ತಿ ತೋರಲಿಲ್ಲ.''

ಬ್ರಹ್ಮ ಸತ್ಯವು ಏಕೆ ಕಾಣುತ್ತಿಲ್ಲ, ವಿಷಯಗಳು ಕಾಣುವಂತೆ? ಒಂದು ಬಗೆಯ ಮಂಜು ನಮ್ಮ ಸುತ್ತಮುತ್ತ ಹರವಿದೆ. ಆದ್ದರಿಂದ ನಮಗೆ ಕಾಣಿಸುತ್ತಿಲ್ಲ. ಕಾಣುತ್ತಿಲ್ಲವಾಗಿ ಆ ಸತ್ಯವೇ ಇಲ್ಲವೆಂದಲ್ಲ. ಇದೆ. ನಿರಂತರವಾಗಿದೆ. ಸ್ಫುಟವಾಗಿಯೇ ಇದೆ. ನಮಗೆ ಕಾಣುತ್ತಿಲ್ಲ. ಕತ್ತಲೆ ನಮ್ಮ ದೃಷ್ಟಿಯನ್ನು ಆವರಿಸಿದೆ.

*ಊರ ಮಧ್ಯದ ಕಣ್ಣ ಕಾಡಿನೊಳಗೆ*
*ಬಿದ್ದೈದಾವೆ ಐದು ಹೆಣನು. ಬಂದು ಬಂದು*
*ಅಳುವರು, ಬಳಗ ಘನವಾದ ಕಾರಣ !*
*ಹೆಣನೂ ಬೇಯದು, ಕಾಡೂ ನಂದದು,*
*ಬರಿಮಾಡ ಉರಿಯಿತ್ತು ಗುಹೇಶ್ವರ !*

ಊರ ಮಧ್ಯದ ಕಣ್ಣ ಕಾಡು ಇದು. ಕಣ್ಣಿಗೆ ನಿಲುಕುವ ಕಾಡು ಇದು. ವಿಶ್ವದೊಳಗೆ ಈ ವಿಷಯ ಪ್ರಪಂಚವೆಂಬ ಕಾಣುವಂತಹ ಕಾಡು ಹರವಿದೆ. ಈ ಕಾಡಿನಲ್ಲಿ ಈ ಸಂಸಾರದೊಳಗೆ ಐದು ಹೆಣ ಬಿದ್ದಿವೆ. ಶಬ್ದ, ಸ್ಪರ್ಶ, ರೂಪ, ರಸ, ಗಂಧ ಇವು ಐದು ಹೆಣ. ಜಡ ವಿಷಯ. ಆದರೆ ಇವುಗಳಿಗಾಗಿ ಬಂದು ಬಂದು ಅಳುವವರು ಬಹಳ. ಅವರ ಬಳಗ ಬಹು ದೊಡ್ಡದು. ಭೂಮಂಡಲಕ್ಕೆ ಇಳಿದು ಬಂದವರೆಲ್ಲ ಈ ವಿಷಯಗಳಿಗಾಗಿ ಶ್ರಮಿಸುತ್ತಾರೆ, ಹಪಹಪಿಸುತ್ತಾರೆ, ದುಃಖಿಸುತ್ತಾರೆ, ಅಳುತ್ತಾರೆ, ಎಲ್ಲರೂ !

ಕನಕ, ಕಾಮಿನಿ, ಕಾಂಚನಕ್ಕಾಗಿ ಕೆಟ್ಟಿತು ಈ ಲೋಕವೆಲ್ಲ. **'ಬಳಗ ಘನವಾದ ಕಾರಣ'** ದೊಡ್ಡವರು ಸಣ್ಣವರು ಎಲ್ಲರೂ ಕನಕಾದಿಗಳಿಗಾಗಿ ಕಾತರಿಸುತ್ತಾರೆ. ಈ ವಿಷಯಗಳಲ್ಲಿ ಸತ್ಯತೆ ಇಲ್ಲ ಎಂಬುದನ್ನು ಯಾರೂ ಗಮನಿಸುತ್ತಿಲ್ಲ ! ಏಕೆ? ಎಲ್ಲರೂ ವಿಷಯ ವ್ಯಥಿತರಾದುದರಿಂದ ಅದು ಸರಿಯೋ ತಪ್ಪೋ ಎಂಬ ಸಂದೇಹವೇ ಬರುತ್ತಿಲ್ಲ. ನಾನು ಅಳುತ್ತಿರುವಾಗ ನೀವೂ ಯಾರೂ ಅಳದೆ ಇದ್ದರೆ, ನಾನು ದುಃಖಿಸುವುದು ಸರಿಯೆ ಎಂಬ ಸಂಶಯ ಬರುವುದು. ನಾನು ಅಳುವಂತೆ ಎಲ್ಲರೂ ಅಳುತ್ತಿದ್ದರೆ ಸಂಶಯ ಹೇಗೆ ತಾನೆ ಬಂದೀತು? ಹಾಗೆ ಈ ಪ್ರಪಂಚದ ಹಿಂದೆ ಇಷ್ಟು ಧಾವಿಸಿ ಧಾವಿಸಿ ಕಷ್ಟಪಡುತ್ತಿರುವೆವು. ಎಲ್ಲರೂ ನಮ್ಮಂತೆ ಕಷ್ಟಪಡುವವರೇ. ಆ ಇಂದ್ರನಿಂದ ಹಿಡಿದು, ಈ ಚಂದ್ರನವರೆಗೆ ಎಲ್ಲರೂ ಸಂಸಾರಕ್ಕಾಗಿ ಆಸೆ ಪಡುವವರೇ. ಹೀಗಿರವಾಗ ಅಳುವುದು ತಪ್ಪು ಎಂದು ಹೇಳುವ ಶಕ್ತಿ ಯಾರಿಗೆ? ಎಲ್ಲರೂ ಬಹುಪತ್ನಿಗರಿದ್ದರೆ ಅದು ಸರಿ, ತಪ್ಪು ಎಂದು ಹೇಳುವ ಧೈರ್ಯ ಯಾರಿಗೆ ಬಂದೀತು?

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.





ಹಾಗೆ ಸಂಸಾರ ವಿಷಯಗಳು ಹೆಣ. ಎಲ್ಲರೆದುರೂ ಕಾಣುತ್ತಿವೆ. ಅವು ನಿರ್ಜೀವ. ನಮ್ಮನ್ನು ಅವು ತಿಳಿಯವು. ಆದರೆ ನಮಗೆಲ್ಲಾ ಅವು ಇಷ್ಟ, ಮೋಹಕರ. ಅವುಗಳಿಗಾಗಿ ಎಂಥ ಪರದಾಟ ! ಹೋರಾಟ ! ಧನ ಕನಕಾದಿಗಳೆಲ್ಲ ಜಡವಾಗಿವೆ ಎಂಬುದು ನಮಗೆ ನಿಶ್ಚಯವಾಗದಾಗಿದೆ.

ದುಡ್ಡು ಯಾರ ಕೈಗೆ ಹೋದರೂ ತನ್ನ ಮೊದಲಿನ ಮಾಲೀಕನನ್ನು ನೆನೆಸದು. ಎರಡನೆಯ ಮಾಲೀಕ ಯಾರು? ತಿಳಿಯದು. ಕಳ್ಳ ಕದ್ದ ದುಡ್ಡು ಅವನ ಜೇಬಿಗೆ. ದುಡ್ಡಿಗೆ ಇದು ಕಳ್ಳನ ಜೇಬು, ತನಗೆ ಸಲ್ಲದ ಸ್ಥಾನ ಎಂಬುದು ತಿಳಿಯದು. ಆದ್ದರಿಂದಲೆ ಅದು 'ಶವ'. ಧನಕ್ಕೆ 'ಹೆಣ'ವೆಂದು ಕರೆಯುವ ಧೈರ್ಯ ಸಂತರಿಗೆ, ಅರಿತವರಿಗೆ ಮಾತ್ರ ! ಸಾಮಾನ್ಯರಿಗೆ ಅದು ಪ್ರಿಯ, ಪರಮಾರ್ಥ! ಬ್ರಹ್ಮವಸ್ತು!

'ಬಿದ್ದೈದಾವೆ ಐದು ಹೆಣ !' ಐದು ಹೆಣ ಬಿದ್ದಿವೆ !' ಬಳಗ ಬಹಳ ದೊಡ್ಡದು. ಎಲ್ಲರೂ ಇದರ ಬಂಧುಗಳೇ. ಕನಕ, ಕಾಂಚನ, ಕೀರ್ತಿ – ಈ ಮೂರರ ಬಳಗ, ಜಗವೆಲ್ಲ.

ಮೂರಕ್ಕೆ ಮರುಳು ಮೂರು ಲೋಕ. ನಾವು ಕಲ್ಪಿಸಿದ ದೇವ ದೇವತೆಗಳೂ ಮೂರರ ಆಕರ್ಷಣೆಯಿಂದ ಹೊರಗಿಲ್ಲ. ಭಕ್ತ ಹರಕೆ ಹೊತ್ತ. ಒಂದು ಆಭರಣಕ್ಕಾಗಿಯೋ ಒಂದಿಷ್ಟು ಅಲಂಕರಣಕ್ಕಾಗಿಯೋ ದೇವತೆಗಳು ಕಾಯ್ದು ಕೂತಿರುತ್ತಾರೆ. ಆ ವಸ್ತುಗಳಿಗಾಗಿ ಹಾಗೂ ಭಕ್ತರು ಮಾಡುವ ಸ್ತುತಿಗಾಗಿ ಆ ದೇವತೆಗಳು ಏನು ಬೇಕಾದರೂ ಕೊಡಲು ಸಿದ್ಧ, ವರವಾಗಿ ! ದೇವತೆಗಳೆ ಹೀಗೆಂದಾಗ ಮಾನವರ ಮಾತೇನು? ಅವರೆಲ್ಲ ಐವರ ಭಕ್ತರು ! ವಿಷಯ ಲಾಲಸರು. ಎಂತಲೆ ನಮ್ಮನ್ನೆಲ್ಲ ಅಲ್ಲಮರು ಹೆಣದ ಬಳಗದಲ್ಲಿ ಹಾಕಿದರು. ಇದು ನಮ್ಮ ಬಳಗ ಅಲ್ಲ, ಇದು ಗುಹೇಶ್ವರ ಲಿಂಗದ ಬಳಗ ಅಲ್ಲ, ಹೆಣದ ಬಳಗ ಇದು ! ಎಂದರು.

ಈ 'ಹೆಣವೂ ಬೇಯದು' ಇಷ್ಟು ಜನ ಅಳುತ್ತಾರೆ ಎಂದು ಕನಿಕರಿಸಿ. ಈ ವಿಷಯಗಳು (ಹೆಣಗಳು) ಬೆಂದು, ಸವಿಯಾಗಿ, ಆ ಜನರಿಗೆ ತೃಪ್ತಿ ಕೊಟ್ಟಾವೇನು? ಇಲ್ಲ. 'ಕಾಡೂ ನಂದದು' ಈ ಜಗತ್ತಿನ ಆಸೆಯೂ ಹರಿಯದು ! 'ಬರಿ ಮಾಡ ಉರಿಯಿತ್ತು ಗುಹೇಶ್ವರ' ಮಾಡ ಅಂದರೆ ಆಯುಷ್ಯ. ಬರೀ ಆಯುಷ್ಯ ಹೋಯಿತೆ ವಿನಃ ಯಾವ ಪುರುಷಾರ್ಥವೂ ದೊರೆಯಲಿಲ್ಲ. ವಿಷಯಗಳೆಲ್ಲ ದೊರೆತ ಬದುಕು ಈ ಕಡೆ ಸಾರ್ಥಕವಾಯಿತೆಂದಿಲ್ಲ.

ಗಳಿಸಿದ್ದಾಯ್ತು ಲಕ್ಷಾಂತರ. ಹೇಮ ಸಂಪಾದಿಸಿದುದಾಯ್ತು. ಲೋಕದವರಿಂದ ಪ್ರಶಸ್ತಿ, ಮಾನ, ಗೌರವ, ಉಘೆ ಚಾಂಗು ಭಲಾ ಏನೆಲ್ಲ ಪಡೆದಾಯ್ತು ! ಆದರೆ ಅದರಿಂದ ಆಸೆ ಹಿಂಗಿತೆ? ಸಂತುಷ್ಟಿ ಉಂಟಾಯಿತೆ? ಬದುಕು ಪೂರ್ಣಗೊಂಡಿತೆ? ಏನೂ ಆಗಲಿಲ್ಲ. ಕೇವಲ ಆಯುಷ್ಯ ಕಳೆದಾಯ್ತು! ಎಲ್ಲ ಕತ್ತಲಲ್ಲಿ! ಕಣ್ಣಿನ ಮಾಯಾ ಮಂಜು ಹರಿಯಲಿಲ್ಲ.

*ಜ್ಯೋತಿ ಕಂಡಾ, ಇರಲು ಕತ್ತಲೆ ಕಂಡಾ !*
*ನಿಧಾನ ಕಂಡಾ, ಇರಲು ಬಡತನ ಕಂಡಾ !*
*ಪ್ರಸಾದ ಕಂಡಾ, ಕಂಡೊಡೆ ಪ್ರಳಯ ಕಂಡಾ !*
*ಗುಹೇಶ್ವರ ಕಂಡಾ, ಇದು ಭ್ರಾಂತು ಕಂಡಾ !*

ನಮ್ಮ ಪರಿಸ್ಥಿತಿ ವರ್ಣಿಸುತ್ತಾರೆ. ಜಗತ್ತಿನಲ್ಲಿ ಸತ್ಯದ ಜ್ಯೋತಿ ಪ್ರಜ್ವಲಿಸುತ್ತ ಇದೆ. ಆದರೆ ನಮ್ಮ ಮಟ್ಟಿಗೆ ಕತ್ತಲು ! ಏನೂ ಕಾಣದು! ಲೌಕಿಕವನುಳಿದು ಮತ್ತೇನೂ ಕಾಣದು! ವಿಶ್ವದಲ್ಲಿ ದೈವಿಸತ್ಯ ವಾದರೂ ಇದೆಯೇ? ಎಂದು ಸಂದೇಹಿಸುವಷ್ಟು ದಟ್ಟವಾಗಿ ಕತ್ತಲೆ ಕಣ್ಣುಗಳ ಮುತ್ತಿದೆ.

**'ನಿಧಾನ ಕಂಡಾ, ಇರಲು ಬಡತನ ಕಂಡಾ'** – ವಿಶ್ವದೊಳಗೆ ಬೇಕಾದಷ್ಟಿದೆ; ಯಾವುದಕ್ಕೂ ಏನೂ ಕೊರತೆ ಇಲ್ಲ. ಸಾಗರಗಳು ತುಂಬಿ ತೆರೆಯಾಡುತ್ತಿವೆ. ಆಕಾಶದ ಮೇಘಗಳ ಜಲ ಸುರಿಯುತ್ತಿವೆ. ಬಾಡಿಹೋಗದಂಥ ಅರಣ್ಯ ಹರವಿಕೊಂಡಿವೆ. ಮುಗಿಯದಂತೆ ಬಯಲು ವಿಸ್ತರಿಸಿದೆ. ಆರದಂತೆ ಜ್ಯೋತಿಗಳು ಮಿನುಗುತ್ತಿವೆ ಅಂತರಿಕ್ಷದಲ್ಲಿ. ನಿಸರ್ಗ ಸಿರಿವಂತ! ನಾವಿರುವ ಈ ಜಗತ್ತಿನಲ್ಲಿ ಸಂಪದ ತುಂಬಿ ನಿಂತಿದೆ! ಆದರೆ ನಾವು ಬಡವರು! ದೀನ ದರಿದ್ರರಾಗಿ ಬಾಳುತ್ತಿದ್ದೇವೆ!

**'ಪ್ರಸಾದ'** ಭಗವತ್ ಕಾರುಣ್ಯದ ವಸ್ತು. ಜಗವೆಲ್ಲ ದೇವನು ಕರುಣಿಸಿದ ಪ್ರಸಾದ. ಹಗಲು ರಾತ್ರಿ ನಾವು ಸವಿಯುವುದೇ ಅದನ್ನು. ಸದಾ ದೇವ-ಅನುಗ್ರಹ-ಭುಂಜನ. ಹಾಗಿದ್ದೂ ಜನ್ಮ, ಮರಣಗಳ ಭಾವ ತಪ್ಪಲಿಲ್ಲ ! ಪ್ರಸಾದಾಮೃತದ ಅನುಭವ ಅಂಗವಿಸಲಿಲ್ಲ. ಹಾಗೆ ನೋಡಿದರೆ, ಈ ಒಳಹೊರಗಿನ ಸಮಸ್ತ ಜಗತ್ತು ಗುಹೇಶ್ವರ ಲಿಂಗ. ಸತ್ಯ ! ಆದರೆ ನಮ್ಮ ದೃಷ್ಟಿಗೆ ಅದು 'ಭ್ರಾಂತಿ' ! ಮೋಹ ಮೂಲ !

ಎಲ್ಲ ಬಡತನ ಎನಿಸಿದೆ ಅಲ್ಲೇ ಶ್ರೀಮಂತಿಕೆ ಕಾಣಬೇಕು. ಎಲ್ಲಿ ಜನ್ಮ ಮರಣಗಳ ಭಯ ಬರುತ್ತಿದೆ ಅಲ್ಲಿಯೇ ಅಭಯಾವಸ್ಥೆ ಉಂಟಾಗಬೇಕು. ಎಲ್ಲಿ ಇದು ಭ್ರಮೆ ಎಂದು ಅನ್ನಿಸುತ್ತಿದೆ ಅಲ್ಲಿಯೇ ಗುಹೇಶ್ವರ ಲಿಂಗ ಕಾಣಬೇಕು. ನಮ್ಮೊಳಗಿರುವ ಕತ್ತಲೆ ಮರೆಯಾಗಬೇಕು, ನಮ್ಮೊಳಗಿರುವ ಭಯದ ಕಲ್ಪನೆ ಹರಿಯಬೇಕು. ಅಷ್ಟೇ ಅಲ್ಲ ನಾವು ಯಾವುದಕ್ಕೆ ಜಗತ್ತು, ಜಗತ್ತು ಎನ್ನುತ್ತೇವೆಯೋ ಅಂಥ ಜಗತ್ತಿನಲ್ಲಿಯೇ ಗುಹೇಶ್ವರ ಅಸ್ತಿತ್ವದ ಭಾನ ಬರಬೇಕು ! ಹೀಗೆ ಆಗಬೇಕಾದರೆ ಏನು ಮಾಡಬೇಕೋ ಅದೇ 'ಭಗವತ್ ಚಿಂತನ'!

**'ವಿಷಯಾಃ ವಿನಿವರ್ತಂತೇ!'** ಯಾವಾಗ? **'ನಿರಾಹಾರಸ್ಯ ದೇಹಿನಃ'** ವಿಷಯಗಳನ್ನು ದೂರ ಸರಿಸುವುದಕ್ಕೆ ಬರುತ್ತದೆ. ವಿಷಯಗಳು ನಮ್ಮನ್ನು ಬಿಟ್ಟು ದೂರ ಹೋಗಬಲ್ಲವು. ಆದರೆ ವಿಷಯಾನುರಾಗ ದೂರ ಹೋಗವುದಿಲ್ಲ. ರಸವರ್ಜ್ಯಂ. ವಿಷಯಗಳ ರಾಗ ದೂರ ಹೋಗುವುದು ಕಷ್ಟ! ನಾವು ಬಹಳವಾದರೆ ಹೆಂಡತಿ, ಮಕ್ಕಳು, ಮನೆ ಬಿಡಬಲ್ಲೆವು. ಎಲ್ಲೋ ದೂರ ಹೋಗಬಲ್ಲೆವು. ಆದರೆ ಬಿಟ್ಟುದರ ರಸ ಉಳಿದಿರುತ್ತದೆ! ವಿಷಯಗಳು ದೂರವಾದರೂ ರಸ ಉಳಿಯುತ್ತದೆ.

ಒಬ್ಬ ಯುವಕ, ಮೈಸೂರಿನಲ್ಲಿ. ದೊಡ್ಡ ಮನೆ, ಸುಶೀಲ ಹೆಂಡತಿ, ಎರಡೇ ಎರಡು ಸುಂದರ ಮಕ್ಕಳು. ಸಾಕಷ್ಟು ಆಸ್ತಿ. ಬಂಧು ಬಾಂಧವರು. ಪ್ರವಚನಕ್ಕೆ ಬಂದ. ಕೇಳಿದ. ವಿರಾಗ ಉಂಟಾಯಿತು. ಮನೆಯತ್ತ ತಿರುಗಿ ಹೋಗದೆ ನೇರವಾಗಿ ಗೌರೀಶಂಕರ ಗಿರಿಯತ್ತ ಧಾವಿಸಿದ. ಪ್ರಶಾಂತ, ನಿರ್ಜನ ಸ್ಥಾನದಲ್ಲಿ ಕುಳಿತ. ವರುಷ ವರುಷ ಕಳೆದವು ಸನ್ಯಾಸಿಯಾಗಿ. ಒಂದು ಸಲ ಅಲ್ಲಿಗೆ ಯಾತ್ರಿಕ ಸನ್ಯಾಸಿಗಳು ಬಂದರು. ಅವರಲ್ಲಿ ಒಬ್ಬ ಚಿಕ್ಕವ. ತೇಜಸ್ವಿ. ಗಿರಿಯ ಸನ್ಯಾಸಿಯು ಈ







ಚಿಕ್ಕ ಸನ್ಯಾಸಿಯನ್ನು ಮಾತನಾಡಿಸಿದ. ಗೊತ್ತಾಯಿತು ಅವನು 'ತನ್ನ ಮೂಲ ಊರಿನವ'ನೆಂದು! ಮೈಸೂರಿನವನೆಂದು. ಬಹಳ ಆನಂದ. ಅವನನ್ನು ಕರೆದು ಕೂಡಿಸಿಕೊಂಡ. ಉಣಿಸಿ ಉಪಚರಿಸಿದ. ಬಳಿಕ ಕೇಳಿದ 'ಹೇಗಿದೆ ಮೈಸೂರು?' 'ಬಹಳ ಚೆನ್ನಾಗಿದೆ!' 'ಇಂಥ ಓಣಿಯೊಳಗೆ ಇಂಥದೊಂದು ಮನೆಯಿದೆ, ಗೊತ್ತಿದೆಯಾ ನಿನಗೆ?' 'ಅದೇ ಓಣಿಯೊಳಗೆ ನಾನು ಇರುವುದು! ಹತ್ತು ವರುಷಗಳ ಹಿಂದೆ ಅಲ್ಲಿ ಒಬ್ಬ ಒಳ್ಳೆಯ ಮನುಷ್ಯನಿದ್ದ. ಆತ ಹೆಂಡತಿ ಮಕ್ಕಳು ಎಲ್ಲರನ್ನೂ ಪರಿತ್ಯಾಗ ಮಾಡಿ ಹಿಮಾಲಯಕ್ಕೆ ಹೋಗಿಬಿಟಿದ್ದಾನೆ!' 'ಆ ಮನೆಯ ಮಕ್ಕಳು ಮಹಿಳೆ ಹೇಗಿದ್ದಾರೆ...?' 'ಆಗ ಚಿಕ್ಕ ಸನ್ಯಾಸಿ ನುಡಿದ. 'ಸನ್ಯಾಸಿಗಳೇ, ನೀವಾರು? ನನಗೆ ಗೊತ್ತಾಯ್ತು. ಇಷ್ಟೆಲ್ಲ ಆಸಕ್ತಿ ಇದ್ದರೆ, ನೀವು ತಿರುಗಿ ಮನೆಗೆ ಹೋಗುವುದೇ ಲೇಸು ! ನೀವು ಎಲ್ಲ ತ್ಯಜಿಸಿದರೂ ಆ ಮನೆಯ ಆಸಕ್ತಿ-ರಸ ಹಾಗೆಯೇ ಉಳಿದುಬಿಟ್ಟಿದೆ.'

'ವಿಷಯಾಃ ವಿನಿವರ್ತಂತೇ' ದೂರ ಹೋದರೆ ವಿಷಯಗಳು ಹಿಂದುಳಿಯುತ್ತವೆ. ಆದರೆ ಆ ವಿಷಯ-ವಿಷಯಕ 'ರಸ' ಉಳಿದುಕೊಳ್ಳುತ್ತದೆ. ಅದೂ ಹೋಗಬೇಕಾದರೆ 'ಪರವಸ್ತುದರ್ಶನ' 'ಸತ್ಯದ ಜ್ಞಾನ' ಅವಶ್ಯ! ಅದಕ್ಕಾಗಿ ದೇವ-ಚಿಂತನ. ಅನಂತ ಸತ್ಯವಾದ ಒಂದು ಅಮೂಲ್ಯ ತತ್ತ್ವ ಇದೆ ಎಂಬ ಜ್ಞಾನ ಅಳವಟ್ಟರೆ ಕತ್ತಲೆ- ಅಜ್ಞಾನ ಹರಿಯುತ್ತದೆ! ರಸ ಆರುತ್ತದೆ! ಚಿಂತನೆ ಸಾಗಲು ಎರಡು ಸಂಗತಿ ಅವಶ್ಯ. ಒಂದು ಸತ್ಸಂಗ, ಎರಡನೆಯದು ಶ್ರವಣ.

ಕತ್ತಲೆ ಹರಿಯಲು ಸೂರ್ಯ ಬರಬೇಕು. ಹಾಗೆ ಮನದ ಕರಾಳ ರಾತ್ರಿ ಸರಿಯಬೇಕಾದರೆ ಸಂತರ ಸಂಗ, ಶರಣರ ಅನುಭಾವ ಅವಶ್ಯ. ಸಂಗವು ನಮ್ಮನ್ನು ನಿರ್ಭಯಗೊಳಿಸುತ್ತದೆ; ಅನುಭಾವ ವಚನ ಶ್ರವಣವು ನಮ್ಮನ್ನು ಆಧ್ಯಾತ್ಮಿಕವಾಗಿ ಶ್ರೀಮಂತಗೊಳಿಸುತ್ತದೆ. ಎಂದೇ **'ಶಿವಪಥವನರಿಯಲು ಗುರುಪಥ' 'ಕೂಡಲಸಂಗಮ ದೇವನ ಅರಿಯಲು ಶರಣರ ಸಂಗ'** ಎಂದರು ಅಣ್ಣನವರು.

ಪ್ರವಚನ ಹಾಗೂ ಸಂತದರ್ಶನ ಬಹು ಮುಖ್ಯ. ನಾವು ಕೇಳಬೇಕು. ನಿಯಮಿತವಾಗಿ, ದೀರ್ಘಕಾಲ ಬಲ್ಲವರ ನುಡಿಗಳ ಆಲಿಸಬೇಕು. ಕೇಳಿದುದೆಲ್ಲ ಶೀಘ್ರ ಫಲವೀಯುವುದೆಂದಲ್ಲ. ಕೇಳುತ್ತಾ ಇದ್ದರೆ ಒಂದು ಪರಿವರ್ತನೆಯ ಕ್ಷಣ ಬಂದೇ ಬರುವುದು! ಸುಮ್ಮನೆ ಕೇಳುತ್ತಿರುವುದು. ಕೇಳುವಲ್ಲಿಯೇ ಶರಣರ, ಜ್ಞಾನಿಗಳ ದರ್ಶನ ಹಾಗೂ ಸಂಗ ಸಮನಿಸುತ್ತವೆ. ಅವೆರಡರ ಪರಿಣಾಮವಾಗಿ ಒಂದು ದಿನ ಪರವಸ್ತುವಿನ ಭಾನ ಉಂಟಾಗುತ್ತದೆ. ಸಾಂಸಾರಿಕ ರಸ ಬತ್ತಿ ಹೋಗುತ್ತದೆ.

ಶರಣರು ಅನುಭವ ಮಂಟಪ ಕಟ್ಟಿಕೊಂಡರು. ನೂರಾರು ಸಂಖ್ಯೆಯಲ್ಲಿ ದಿನವೂ ನಿಯತ ಸಮಯಕ್ಕೆ ಕಲೆಯುತ್ತಿದ್ದರು. ಸಮೂಹದಲ್ಲಿ **'ಶಿವವಾತಾವರಣ'** ನಿರ್ಮಾಣವಾಗುತ್ತಿತ್ತು. ಅಲ್ಲಿ ಕುಳಿತ ಎಂಥ ಸಾಮಾನ್ಯರಲ್ಲಿಯೂ 'ದೇವ' ಭಾವ ಮೂಡುತ್ತಿತ್ತು. ಅಂತರಂಗ ಅನುಭಾವಾವತರಣಕ್ಕೆ ಸನ್ನದ್ಧವಾಗುತ್ತಿತ್ತು. ಪ್ರಾಪಂಚಿಕ, ಮಾಯಿಕ ಬಂಧನಗಳು ಕಳಚಿ ಬೀಳುತ್ತಿದ್ದವು. ಸತ್ಸಂಗವು ಬಹು ಸುಲಭ ಸಾಧನ. ಏಕಾಂತದಲ್ಲಿ ಘೋರ ಧ್ಯಾನವನ್ನಾಚರಿಸಿದರೂ ಲಭ್ಯವಾಗದ ಆನಂದಾನುಭವ ಸತ್ಸಂಗದಿಂದ ಸುಲಭ್ಯ. ಸತ್ಸಂಗದಲ್ಲಿ ಯಾರು ಹೇಳುತ್ತಾರೆ ಅಥವಾ ಯಾರು ಕೇಳುತ್ತಾರೆ ಎನ್ನುವುದು ಮುಖ್ಯವಲ್ಲ, ಅಲ್ಲಿರುವ ಪವಿತ್ರ ಪರಿಸರ ಮಹತ್ವದ್ದು. ಹೇಳುವುದು ಕೇಳುವುದು ನಿಮಿತ್ತಮಾತ್ರ. ಪರಿಸರ ಶಿವವಾದಷ್ಟು ಮನಸ್ಸು ಅರಳುತ್ತದೆ. ಅಲ್ಲಿ ಜ್ಞಾನ ಜ್ಯೋತಿ ಹೊತ್ತಿಕೊಳ್ಳುತ್ತದೆ. ಮುಕ್ತಿಯ ಅನುಭವ ಉಂಟಾಗುತ್ತದೆ.

ಸತ್ಸಂಗ ಅಷ್ಟು ಮಹತ್ವದ್ದು ಎಂದೇ ಶರಣರ ಪ್ರಾರ್ಥನೆ.

*ಕರಿಯನಿತ್ತಡೆ ಒಲ್ಲೆ*
*ಸಿರಿಯನಿತ್ತಡೆ ಒಲ್ಲೆ*
*ಹಿರಿದಪ್ಪ ರಾಜ್ಯವನಿತ್ತಡೆ ಒಲ್ಲೆ*
*ನಿಮ್ಮ ಶರಣರ ಸೂಳ್ನುಡಿಯ ಒಂದರಗಳಿಗೆ ಇತ್ತಡೆ*
*ನಿಮ್ಮನಿತ್ತೆ ಕಾಣಾ ರಾಮನಾಥಾ !*

ನಾವು ಇಷ್ಟೆಲ್ಲಾ ದುಡಿಯುವುದು ಗಳಿಸುವುದು ಸತ್ಸಂಗ ವಾತಾರವಣ ನಿರ್ಮಾಣ ಮಾಡಿಕೊಳ್ಳುವುದಕ್ಕಾಗಿ. ಯಾವ ವಾತಾವರಣದೊಳಗೆ 'ನಾನು' ಅನ್ನುವುದು ನನ್ನೊಳಗೆ ಸುಳಿಯುವುದಿಲ್ಲ, 'ನಾನು' ಅನ್ನುವುದು ನಿಮ್ಮೊಳಗೆ ಸುಳಿಯುವುದಿಲ್ಲ, ಇಂತಹ ವಾತಾವರಣವೇ ಸದ್ ವಾತಾವರಣ. ನಾನು ಹೇಳುವೆ ಎಂಬ ಭಾವ ನನ್ನಲ್ಲಿ ಸುಳಿದರೆ ಅದು ಸತ್ಸಂಗ ಅಲ್ಲ. ನಾವು ಕೇಳುವೆವು ಎಂಬ ಭಾವ ನಿಮ್ಮಲ್ಲಿ ಸುಳಿದರೆ ಅದು ಸತ್ಸಂಗ ಅಲ್ಲ. ಕೇಳುವ ಹೇಳುವ ಎರಡೂ ಭಾವ ಬೇಡ. ಜ್ಞಾನಮಗ್ನತೆ ಮುಖ್ಯ.

ಹೇಳುವ ನಾನು ಒಂದು ಮಾಧ್ಯಮ. ಕೇಳುವ ನೀವೂ ಒಂದು ಮಾಧ್ಯಮ! ವಿಶ್ವನಿಯಾಮಕ ಕ್ರಿಯಾಚೇತನದ ಎರಡು ಸಾಧನಗಳು ನಾವು! ಹೀಗೆ ಭಾವಿಸಿದರೆ ಅನುಭವ ಸಾಧ್ಯ. 'ನಾನು' ಇಲ್ಲದ ಹೇಳುವಿಕೆ, ಕೇಳುವಿಕೆಗಳ ಮಧ್ಯ ಬಹು ತ್ವರಿತವಾಗಿ ದಿವ್ಯ-ಬೆಳಕು ಹೊಮ್ಮುತ್ತದೆ.

ಬಸವಣ್ಣನ ಕಲ್ಯಾಣದ ಅನುಭವ ಮಂಟಪವೊಂದು ವಿಶೇಷ. ಅಲ್ಲಿ ಕೆಲವು ನಿಶ್ಚಿತ ವ್ಯಕ್ತಿಗಳೇ ಹೇಳುವವರು. ಉಳಿದವರೆಲ್ಲ ಕೇಳುವವರು ಎಂದಿರಲಿಲ್ಲ. ಹೇಳುವ ಕ್ಷಣ ಬಂದಾಗ ಹೇಳುವುದು. ಕೇಳುವ ಕ್ಷಣ ಬಂದಾಗ ಕೇಳುವುದು. ಅಲ್ಲಮರೂ ಹಾಗೆಯೇ. ಶೂನ್ಯ ಸಿಂಹಾಸನವೇರುವ ಪ್ರಸಂಗ ಬಂತು. ಏರಿದರು. ಅನುಭಾವ ನಡೆಸಿದರು. ಆದರೆ ಆ ಸ್ಥಾನಕ್ಕೆ ಅವರು ಅಂಟಿಕೊಳ್ಳಲಿಲ್ಲ, ಎಂದೂ. ಎಷ್ಟು ಸಹಜವಾಗಿ ಕುಳಿದರೋ ಅಷ್ಟೇ ಸಹಜವಾಗಿ ಇಳಿದು ಹೋದರು. ಎಂದೇ ಬಸವಣ್ಣನವರು ರೂಪಿಸಿದ್ದು ಅನುಭಾವ ಮಂಟಪ. ಅನುಭಾವಿಗಳ ಸಂಗ ! ವಿಮಲ ಜ್ಞಾನಿಗಳ ಮಿಲನ! ಸಮ್ಮಿಲನ!

ಅನುಭವ ಮಂಟಪದಲ್ಲಿ ಎಲ್ಲರೂ ಸ್ವತಂತ್ರರು ಹೇಳಲು. ನುಲಿಯ ಚಂದಯ್ಯ ಒಂದು ರೀತಿ ಹೇಳಿದರೆ, ಆಯ್ದಕ್ಕಿ ಮಾರಯ್ಯ ಮತ್ತೊಂದು ರೀತಿ. ನಾವು ಹೇಳಿದಂತೆಯೇ ಕೇಳಬೇಕು ಎಂದು ಅಲ್ಲಮ, ಬಸವಣ್ಣ ಆಗ್ರಹಿಸಲಿಲ್ಲ. ಮುಕ್ತ ವಾತಾವರಣ ಕಲ್ಪಿಸಿದರು. ಅಲ್ಲಿ ಎಲ್ಲರೂ ಬೋಧಕರು. ಎಲ್ಲರೂ ಶ್ರಾವಕರು. ಬದುಕಿನಲ್ಲಿ ಇಂಥ ಅಮೂಲ್ಯ ಸತ್ಸಂಗ ಅವಶ್ಯ. ಇದರಿಂದಲೇ ಚಿಂತನ; ಇದರಿಂದಲೇ ಚೇತನಾನುಭೂತಿ. ಆನಂದಾನುಭೂತಿ.

*(ಕೃಪೆ: ಭಾವಚ್ಚಿಂತನ)*






# ಶ್ರೀ ಸಿದ್ಧಗಂಗಾ ಕ್ಷೇತ್ರ: ಪರಿಸರ ಮತ್ತು ಈಚಿನ ಶೋಧಗಳು

– ಡಾ. ಎಂ.ಜಿ. ನಾಗರಾಜ್ *

*(ಕಳೆದ ಸಂಚಿಕೆಯಿಂದ)*

**ಹರದನಹಳ್ಳಿ ಪರಂಪರೆ :** ಹರದನಹಳ್ಳಿಯಿಂದ ಸಿದ್ದಗಂಗೆಗೆ ಬರುವ ಹಾದಿಯಲ್ಲಿ ಒಂದು ಗಮನಾರ್ಹ ಕ್ಷೇತ್ರವಾಗಿ ರಾಮನಗರ ಜಿಲ್ಲೆ ಚನ್ನಪಟ್ಟಣ ತಾ. ಸೋಗಾಲ ಗ್ರಾಮ ಕಾಣಬರುತ್ತದೆ. ಅಲ್ಲಿ ಪ್ರಾಚೀನ ಸೋಮೇಶ್ವರ ಲಿಂಗವೂ, ಬೆಳಗಾವಿ ಸೊಗಲ ಕ್ಷೇತ್ರಕ್ಕೆ ಸಂವಾದಿಯಂತಿದೆ. ಸಪ್ತಮಾತೃಕೆಯರ ಶಿಲ್ಪವೂ ಇಲ್ಲಿದೆ. ಅದನ್ನೆಲ್ಲ ಸ್ವಯಂಪ್ರಭಾಮುನಿ ಪ್ರತಿಷ್ಠಾಪಿದರು ಎಂಬ ಐತಿಹ್ಯವಿದ್ದು, ಸೊಗಲದ ಮುನಿವಳ್ಳಿಯ ಅಗಸ್ತ್ಯಮುನಿಯ ನೆನಪು ತರುತ್ತದೆ. ಈ ಪ್ರದೇಶದ ರಾಜನೊಬ್ಬನಿಗೆ ಅನ್ನಗ್ರಾಹ್ಯವಾಗುವಲ್ಲಿ ಹುಳು ಬೀಳುತ್ತಿತ್ತಂತೆ, ಅದನ್ನು ತಪ್ಪಿಸಲು ರಾಜನಿಗೆ ಔಷಧೋಪಚಾರವಲ್ಲದೆ ಊರನ್ನು ಸ್ವಚ್ಛಗೊಳಿಸುವ ಕಾಯಕ ಮಾಡಿದರಂತೆ. ಇದರ ನೆನಪಿಗೇನೋ ಎಂಬಂತೆ ಸೋಗಾಲ ಗ್ರಾಮದ ಗಡಿಯಲ್ಲಿ ಜಟಾಮುನೀಶ್ವರ ಗುಡಿಯೂ ಇದೆ.[೧೪]

ಈ ಸಂಬಂಧದ ತೌಲನಿಕ ವಿವರಗಳು ಮುಂದಿನಂತಿವೆ.

ಹಾಲಿ ಸೋಗಾಲ ಗ್ರಾಮದಿಂದ ಎರಡು ಕಿ.ಮೀ. ಪಶ್ಚಿಮಕ್ಕೆ 'ಸಾದಳ್ಳಿಗುಡ್ಡ'ವಿದ್ದು, ಅನೇಕ (ತಪಸ್ವಿಗಳಿದ್ದ) ಗವಿಗಳೂ ಇವೆ. ಜನರೂಢಿಯಲ್ಲಿ ಅದು 'ಸಾಧುಗಳ ಗುಡ್ಡ' ಎಂಬ ಹೆಸರಿನಲ್ಲಿ ಪ್ರಚಲಿತವಾಗಿದ್ದುದು, ಈಗ ಸಂಕ್ಷಿಪ್ತವಾಗಿ 'ಸಾದಳ್ಳಿಗುಡ್ಡ' ಎನಿಸಿ ಸೋಗಾಲ ಗ್ರಾಮದಂಚಿಗಿದೆ. ಆ ಗುಡ್ಡಕ್ಕೆ ಸನಿಹದೂರಲ್ಲಿ ಬರಿದೆ ಮುನಿಗದ್ದುಗೆ ಇತ್ತು. ಈ ಸಾದಳ್ಳಿಗುಡ್ಡ ಹಾಗೂ ಮುನಿಗದ್ದುಗೆ ನಡುವೆ ಯಾವ ಗ್ರಾಮವು ಇಲ್ಲ. ಆದಾಗಿ ಗುಡ್ಡದ ಗಡಿ ಗ್ರಾಮವಾಗಿ ಸೋಗಲ>ಸೋಗಾಲ ಎಂಬ ಹೆಸರು ಹೊತ್ತಿರುವಂತಿದೆ. 'ಗಾಲ' ಎಂದರೆ 'ಅಂಚು' ಎಂಬ ಅರ್ಥವನ್ನು ಗ್ರಹಿಸಿದರೆ, ಸೊಬಗಿನ ಅಂಚಿನ ಗ್ರಾಮ 'ಸೋಗಾಲ'ವಾಗಿದೆ ಎನ್ನಬೇಕು. ಅದರ ಪರಿಸರವೂ ಹಾಗೆಯೇ ಚೆಲುವಿನದಾಗಿದೆ.

ಬಹುಶಃ ಇಂದು 'ಸ್ವಯಂಪ್ರಭಾಮುನಿ' ಎಂದು ಜನರೂಢಿಯಾಗಿರುವ ಆ ಮುನಿಯ ದರ್ಶನ ಈ ಸ್ಥಳದಲ್ಲಿ ಆಗಿ ಊರಿನ ನಾಯಕನು ಆ ಮುನಿಗೆ ಭಕ್ತಿ ಗೌರವ ತೋರಿದ ತಾಣವಿದಾಗಿರಬೇಕು. ಅವನಿಗೆ ಅನ್ನದಲ್ಲಿ ಹುಳುಗಳೂ ಬಿದ್ದು ಅನ್ನ ಅಗ್ರಾಹ್ಯವಾಗುತ್ತಿದ್ದ ವಿಷಯ ತಿಳಿದು, ಅದು ಗ್ರಾಹ್ಯವಾಗುವಂತೆ ಆ ನಾಯಕನ ನೆಲೆಯನ್ನು ಸ್ವಚ್ಛಗೊಳಿಸಿಸಿ, ತಿಳಿಸಿ ಅರಿವು ಮೂಡಿಸಿದಂತಿದೆ. ಆದಾಗಿ ಊರಿನ ನಾಯಕನು 'ರಾಜ'ನಾಗಿ ಐತಿಹ್ಯದಲ್ಲಿ ಬೆಳೆದಿದ್ದಾನೆ.

ಉತ್ತರಮುಖಿಯಾಗಿ ಬರಿದೆ ಮುನಿಗದ್ದುಗೆ ಇದ್ದ ನೆಲೆಯನ್ನು ಸುಮಾರು ಎಂಟು ವರ್ಷಗಳ ಹಿಂದೆ ಜೀರ್ಣೋದ್ಧಾರ ಮಾಡಿ, 'ಜಟಾಮುನೀಶ್ವರ' ಪ್ರತಿಮೆಯನ್ನು ಗದ್ದುಗೆ ಮೇಲಿಟ್ಟು, 'ಮುನೇಶ್ವರ ಸ್ವಾಮಿ' ಎಂದು ಪೂಜಾದಿಗಳನ್ನು ಸಲ್ಲಿಸುತ್ತಾರೆ. ಎಡಾರ್ಧ ಪದ್ಮಾಸನಸ್ಥ ಅರೆನಿಮೀಲಿತ ನಯನದ ಮುನಿಯ ಬಲಹಸ್ತದಲ್ಲಿ ತ್ರಿಶೂಲನೇತ್ರದಂಡದಂತೆ ಕಾಣುವ ದಂಡಧಾರಣವಿದೆ. ಜಟಾಮುಡಿಗೆ ಪ್ರಭಾಮಂಡಲ, ಹಾಗೂ ಸಾಂಕೇತಿಕವಾಗಿ ಪಂಚನಾಗ ಹೆಡೆಗಳ ನಾಗಶಿಲ್ಪಾಭರಣವಿದೆ. ಎಡಹಸ್ತದಲ್ಲಿ 'ಓಲೆಕಟ್ಟು' ಧಾರಣವಿದೆ. ಈ ಗದ್ದುಗೆ ಗರ್ಭಗೃಹದ ಮುಂದೆ ಪ್ರಾಚೀನ ಗ್ರಾಮೀಣ ಶೈಲಿಯ ನಂದಿವಿಗ್ರಹವಿದ್ದು, ಅದರ ಪಾಣಿವಟ್ಟದಲ್ಲಿ ಬಹುಶಃ ಪ್ರಣಾಮಭಂಗಿಯ ಹಾಗೂ ಅಂಬೆಗಾಲು ಭಂಗಿಯಲ್ಲಿ ನಮಸ್ಕಾರವಿಡುತ್ತಿರುವ ಭಕ್ತರ ಉಬ್ಬುಶಿಲ್ಪಗಳನ್ನು ಹೊಂದಿದ್ದು, ಇಡೀ ಶಿಲ್ಪ ಗರ್ಭಗೃಹಕ್ಕೆ ಅಭಿಮುಖವಾಗಿದೆ. ಹಾಗೂ ತನ್ನ ಹಳಮೆಯಲ್ಲಿ 'ಜಟಾಕಿರೀಟ ಮುನೀಶ್ವರ'ರ ಐತಿಹ್ಯದ ಪ್ರಾಚೀನತೆಗೆ ಸಾಕ್ಷಿಯಾದಂತಿದೆ. ಈ ಗುಡಿಗೆ ಮುಖಗೋಪುರದಲ್ಲಿ ಮುನೀಶ್ವರರ ವಿವಿಧ ರೂಪಗಳ ಪ್ರತಿಮೆಗಳನ್ನು ಇಡಲಾಗಿದೆ. ಈ ಅಂಶಗಳನ್ನು ಗಮನಿಸಿದರೆ 'ಶತಪವಾಡ ಮಹನೀಯ'ರೆನಿಸಿದ ಶಾಸನೋಕ್ತ ಗೋಸಲಾರ್ಯಯತಿವರ್ಯರು (ರಾಜನ ದುರಿತವನ್ನು ಪರಿಹರಿಸಿದ ಘಟನೆ ಇಲ್ಲಿಯ ಪವಾಡಾತ್ಮಕ ಅಂಶವೆನಿಸಬಹುದು), ಹಾಗೂ 'ಹರದನಹಳ್ಳಿಯ ಗೋಸಲದೇವರು' ಎನಿಸಿದ್ದ ಅವರು ಬೆಳಗಾವಿ ಜಿಲ್ಲೆ ಸವದತ್ತಿ ತಾಲೂಕಿನ ಸೋಗಲ-ಮುನಿವಳ್ಳಿಯಲ್ಲಿ ಅರ್ಜಿಸಿದ ಪಾಂಡಿತ್ಯದ ಯತಿಯಾಗಿ ಶಾಸನೋಕ್ತ 'ಗೋಸಲಾರ್ಯಯತಿ'ಯಾಗಿದ್ದುದರ ಸಂಕೇತ ಇಲ್ಲಿಯೂ ಕಾಣುವಂತಿದೆ. ಊರಾಚೆಗಿನ ಸುಮಾರು ಎರಡು ಕಿ.ಮೀ. ದೂರದಲ್ಲಿರುವ ಈ ಮುನಿಗದ್ದುಗೆಗೆ ಎಲ್ಲರಿಗೂ ಬರಲಾಗುವುದಿಲ್ಲವೆಂದು ಇಂದು ಊರೊಳಗೂ ಈ ಮುನೀಶ್ವರರ ಪ್ರತೀಕ ಗುಡಿಮಂಟಪವನ್ನು ಕಟ್ಟಿ ಮುನಿಪ್ರತಿಮೆ ಶಿವಲಿಂಗಗಳನ್ನು ಇಟ್ಟಿದ್ದಾರೆ.



ಸೋಗಾಲದ ಸೋಮೇಶ್ವರ ದೇಗುಲದ ವಿಮಾನ ಗೋಪುರ (ಜೀರ್ಣೋದ್ಧಾರಕ್ಕೆ ಮುಂಚೆ)



ಸೋಗಾಲದ ಊರಾಚೆಯ ಸಾಧುಗುಡ್ಡದ (ಸಾದಹಳ್ಳಿ ಗುಡ್ಡ) ಪರಿಸರದ (ಸ್ವಯಂಪ್ರಭಾ ಮುನಿ) ಮುನೇಶ್ವರ ಗುಡಿಯ ಮುಖಗೋಪುರ ಕೋಷ್ಟಕಗಳಲ್ಲಿ ಮುನಿಗಳ ಶಿಲ್ಪಗಳು








ಸೋಗಾಲದ ಹೊರಗಣ (ಸ್ವಯಂಪ್ರಭಾ ಮುನಿ ಗೋಸಲಾರ್ಯ ಯತಿ) ಗದ್ದುಗೆ ಒಳನೋಟ.



ಸ್ವಯಂಪ್ರಭಾ ಮುನಿ ಗದ್ದುಗೆಯಲ್ಲಿ ಗೋಸಲಾರ್ಯ ಯತಿಗಳ ಮೂರ್ತಿ ಶಿಲ್ಪ.



ಸ್ವಯಂಪ್ರಭಾ ಮುನಿ ಗೋಸಲಾರ್ಯ ಯತಿಗಳ ಗದ್ದುಗೆ ಎದುರಿನ ನಂದಿ ವಿಗ್ರಹ ಹಾಗೂ ಪಾಣಿಪಟ್ಟದ ಮುಖದಲ್ಲಿ ಪ್ರಣಾಮ ಭಂಗಿಯ ಭಕ್ತರ ಶಿಲ್ಪ



ಸ್ವಯಂಪ್ರಭಾ ಮುನಿಗಳ (ಗೋಸಲಾರ್ಯ) ಊರೊಳಗಿನ ತೋರು ಗದ್ದುಗೆಯಲ್ಲಿ ಲೋಹಶಿಲ್ಪ



ಸೋಗಾಲದ ಸೋಮೇಶ್ವರ ದೇಗುಲದ ಮುಖಮಂಟಪದ ನೋಟ



ಸೋಗಲ ಗ್ರಾಮದೊಳಗಣ ಸ್ವಯಂಪ್ರಭಾ ಮುನಿ (ಗೋಸಲಾರ್ಯ ಯತಿ)ಗಳ ಗದ್ದುಗೆಯ ಮುಖಗೋಪುರ

* ನಂ. ೨೨೧, 'ಅನರ್ಘ್ಯ, ಶ್ರೀ ಜ.ಚ.ನಿ. ಕೃಪೆ' ೭ನೇ ಕ್ರಾಸ್, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-೫೬೦೦೧೦



ಸೋಗಲ ಸೋಮೇಶ್ವರ ದೇಗುಲದ ವಿಮಾನ ಗೋಪುರದ ಇಂದಿನ ನೋಟ



ಸೋಗಲ ಸೋಮೇಶ್ವರ ದೇಗುಲದಲ್ಲಿ ಜೋಡಿ ಬಸವಣ್ಣಗಳ ಶಿಲ್ಪ

ಇನ್ನು ಈ ಸೋಗಾಲದಲ್ಲಿ ಸೋಮೇಶ್ವರ ದೇಗುಲವಿದ್ದು ಇತ್ತೀಚೆಗೆ ಜೀರ್ಣೋದ್ಧಾರಗೊಂಡಿದೆ; ಗಮನಾರ್ಹವಾಗಿ ಸಪ್ತಮಾತೃಕಾ ವಿಗ್ರಹಗಳು, ಮುನಿವಳ್ಳಿ-ಸೋಗಲ ಸೋಮೇಶ್ವರ ದೇಗುಲದಲ್ಲಿರುವವುಗಳನ್ನು ಹೋಲುವಂತಿದೆ. ಈ ಸೋಗಾಲ ಸೋಮೇಶ್ವರ ಗುಡಿಯ ಒಳಗೆ ಜೋಡಿಬಸವಣ್ಣರ ಮೂರ್ತಿ (ನಂದಿವಿಗ್ರಹ)ಗಳಿವೆ. ದೇಗುಲದ ಮುದೆ ಯತಿಬಳಕೆಯ ಪಾದುಕೆಗಳಂತಿರುವ ದ್ವಯಪಾದುಕೆಗಳ ಉಬ್ಬುಶಿಲ್ಪವಿರುವ ಪಾದಪೀಠವಿದೆ. ಪಾದುಕೆಗಳ ಪಾರ್ಶ್ವದಲ್ಲಿ ಯತಿಯಂತೇ(!) ತೋರುವ ತೆರೆದ ಶರೀರದ ವ್ಯಕ್ತಿ ಶಿಲ್ಪವೂ ಇದೆ.



ಸೋಗಲದ ಸೋಮೇಶ್ವರ ಲಿಂಗ

ತೌಲನಿಕವಾಗಿ 'ತ್ರಿಶೃಂಗಿಪುರ' ವೆನಿಸಿದ ಸವದತ್ತಿ ತಾಲೂಕಿನ ಮುರುಗೋಡದ (ಮೂರು ಗುಡ್ಡಗಳ) ಅಂಚಿಗಿರುವ ಸೊಬಗಿನ ಭೌಗೋಳಿಕ ಚೆಲುವಿನ ಬಂಡೆಗಳಿಂದಾವೃತ ನೆಲೆಯಾದ, ನೀಲಕಂಠನಾದ ಸೋಮೇಶ್ವರನ ನೆಲೆಯೂ ಆಗಿರುವ (ಗಲ=ಕಂಠ, ಗಾಲ=ಸೆರಗು, ಅಂಚು, ಎಂಬ ಅರ್ಥ ಗಮನಿಸಿ) ಸೋಗಲದ ಪರಿಸರ ಹಾಗೂ ಯತಿ ಅಂಶಗಳೂ ಚನ್ನಪಟ್ಟಣ ತಾ. ಈ 'ಸೋಗಾಲ'ಕ್ಕೆ ಸರಿಸುಮಾರು ಹೊಂದಾಣಿಕೆಗೊಂಡಿವೆ ಎನ್ನಬೇಕು. ಅಲ್ಲದೆ ಚಾಮರಾಜನಗರ ಜಿಲ್ಲೆ ಹರದನಹಳ್ಳಿ, ಸಿದ್ದಗಂಗೆಗೆ ಸನಿಹವಾದ ಕೊರಟಗೆರೆ ತಾಲೂಕಿನ ಸಿಂಗ್ರಿಹಳ್ಳಿಯ ಕೊಂಗುಮಲ್ಲೇಶ್ವರ ಗುಡಿಯ ಐದು ಶಿವಲಿಂಗಗಳ ಜೋಡಣೆಯ ಐತಿಹ್ಯಕ್ಕೆ ಪೂರಕವಾದ ಕಥಾಸಂಕೇತ ವಾಗಿ, ಸೋಗಾಲದ 'ಜೋಡಿ ನಂದಿವಿಗ್ರಹ'ಗಳ ಜೋಡಣೆ ಇಲ್ಲಿರುವಂತಿದೆ. ಅದರ ಸಂಕೇತವೆಂದರೆ ಬಣಜಿಗ, ಮುತ್ತಿನ ವ್ಯಾಪಾರಿಗಳು, ತಾವು ಆರಾಧಿಸಿದ ದೇವನೆಲೆಗಳಲ್ಲಿ ಕಲ್ಯಾಣದ ಬಸವಣ್ಣನನ್ನು ಸ್ಮರಿಸಿ ಮೂಲ ನಂದಿಯೊಡನೆ ಇನ್ನೊಂದು ನಂದಿಯನ್ನು ಪ್ರತಿಷ್ಠಾಪಿಸುವ ರೂಢಿ. ಕೆಲವಾರು ಕಡೆ ಕಂಡು ಬಂದಿರುವುದಕ್ಕೆ ಪೋಷಕ ಪುರಾವೆ ಎಂಬಂತಿದೆ.[೧೪a] ಹೀಗಾಗಿ ಸೋಗಾಲದಲ್ಲಿ ಶ್ರೀ ಗೋಸಲಾರ್ಯಯತಿಗಳು ಕೆಲಕಾಲ ತಪೋನಿಷ್ಠರಾಗಿದ್ದು ಸೋಮೇಶ್ವರ ಲಿಂಗವನ್ನು (ಸ್ಥಳೀಯರ ರೀತ್ಯಾ ಸ್ವಯಂಪ್ರಭಾಮುನಿಗಳೆನಿಸಿ) ಪ್ರತಿಷ್ಠಾಪಿಸಿ, ತಮ್ಮ ಶಿಷ್ಯರ ಅಪೇಕ್ಷೆಗನುಗುಣವಾಗಿ ಜೋಡಿ ಬಸವಣ್ಣರನ್ನು ಪ್ರತಿಷ್ಠಾಪಿಸಿದಂತಿದೆ. ಈ ಘಟನೆಯ ಮುಂದುವರಿಕೆ, ಕೊರಟಗೆರೆ ತಾಲೂಕು ಸಿಂಗ್ರಿಹಳ್ಳಿಯಲ್ಲಿ ಕೊಂಗು ಮಲ್ಲೇಶ್ವರ ದೇಗುಲದ ಲಿಂಗಗಳನ್ನು ಪ್ರತಿಷ್ಠಾಪಿಸಿದ ಹಾಗೂ ಸಿದ್ಧಗಂಗೆಯಲ್ಲಿ ತಮಿಳು ಶಿಷ್ಯನಿಗೆ ದಾಹ ಇಂಗಿಸಿದ ಐತಿಹ್ಯಕ್ಕೆ ಪೂರಕವಾಗಿದೆ. ಅಂದರೆ ಗೋಸಲಾರ್ಯರು ಇಲ್ಲಿಗೆ ಬರುವಲ್ಲಿ ತಮ್ಮ ದೀಕ್ಷಾಗುರುಗಳಿದ್ದ ಸೊಗಲಕ್ಷೇತ್ರದ ದೈವಿಕ ಪರಿಸರವನ್ನು ನಿರ್ಮಿಸಿ, ಊರಿಗೂ ಸೋಗಾಲ ಎಂಬ ಹೆಸರಿಟ್ಟು ಸಾಗಿದರು ಎಂಬ ಐತಿಹ್ಯಕ್ಕೆ ಪೂರಕವೆಂಬಂತೆ ಈ ಸೋಗಾಲದ ಪರಿಸರ ಇದೆ. ಆ ನಂತರ ಐತಿಹ್ಯಕ್ಕೆ ಪೂರಕವಾಗಿ ಕಾಣಿಸುವ ಕ್ಷೇತ್ರ, ಪಂಚಲಿಂಗೇಶ್ವರ (ಕೊಂಗುಮಲ್ಲೇಶ್ವರ) ಇರುವ ಸಿಂಗ್ರೀಹಳ್ಳಿ ಎನಿಸುತ್ತದೆ.



ಸೋಗಲ ಸೋಮೇಶ್ವರ ದೇಗುಲದಲ್ಲಿ ಸಪ್ತ ಮಾತೃಕ ಶಿಲ್ಪಗಳು



ನಾಗಹೆಜ್ಜೆ ಆವೃತ (!) ದ್ವಯಪಾದಗಳ ಶಿಲ್ಪ

*(ಮುಂದುವರೆಯುತ್ತದೆ)*

14. ಸೋಗಾಲ ಗ್ರಾಮದವರಾದ ಎಂಜಿನಿಯರ್ ಶ್ರೀ ಎಸ್. ಕುಮಾರಸ್ವಾಮಿಯವರು ಈ ಮಾಹಿತಿಯನ್ನು ನೀಡಿದರು.
14a. Mahesh Jumbulingam, Jodi Basava-the Family Diety, Vidyanithi, Centenery Volume, 2005, Karntaka Veerashaiva Vidyahivriddhi Samste, Bengaluru, pp.470.







# ಸಮೃದ್ಧಿಯುಕ್ತ ಬದುಕಿಗೆ ಬಸವಣ್ಣನವರ ಕಾರ್ಯಸೂತ್ರಗಳು

- ಸ.ರಾ. ಸುಳಕೂಡೆ *

**ಬ**ಸವಣ್ಣನವರ ಆಚಾರ-ವಿಚಾರಗಳೆಲ್ಲವೂ ಶ್ರಮ, ಸಂಸ್ಕೃತಿಯನ್ನು ಚಾಚು ತಪ್ಪದೇ ಪಾಲಿಸುವುದೇ ಆಗಿದೆ. ಅವರು ಕಟ್ಟಿದ ಸಮಾಜದಲ್ಲಿ ಸಮಾನತೆಯ ಸಾಧನೆ, ಸಹಜವಾಗಿತ್ತು ಮತ್ತು ಸಾಮರಸ್ಯ ಕಾಪಾಡಿಕೊಳ್ಳುವಲ್ಲಿ ಸಮಂಜಸವೂ ಆಗಿತ್ತು. ಅವರು ಸತ್ಸಂಗದ ಮೂಲಕ ಸಮಾನತೆ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಭದ್ರ ಬುನಾದಿಯನ್ನು ಹಾಕಿದ್ದಾರೆ. ಸತ್ಸಂಗದೊಳಗೆ ಸಕಲರೂ ಯಾವುದೇ ಭೇದ ಭಾವವಿಲ್ಲದೆ ಭಾಗವಹಿಸುವ ಅವಕಾಶವಿತ್ತು. ವಿಶೇಷ ಸೌಲಭ್ಯ-ಅಂತಸ್ತುಗಳಿಂದ ಸಕಲರೂ ದೂರವಿರುವಂತೆ ನೋಡಿಕೊಂಡ ಬಸವಣ್ಣನವರು ಸಮೃದ್ಧಿಯುಕ್ತ ಬದುಕಿನ ಸಾಧನೆಗಾಗಿಯೇ ಅವಿರತ ದುಡಿದರು. ಮನು ಕುಲದೊಳಗೆ ಗೊಂದಲ ಸೃಷ್ಟಿಸಿ, ಸಮಾನತೆಗೆ ಧಕ್ಕೆ ತಂದು, ಶ್ರೇಣಿಕೃತ ಸಮಾಜ ರಚಿಸಿಕೊಂಡಿದ್ದನ್ನು ಅಲ್ಲಗಳೆದು ನಿಂತ ಬಸವಣ್ಣನವರು, ಮಾನವ ಏಕತೆಗೆ ಕಾರ್ಯಸೂತ್ರವನ್ನು ನಿರೂಪಿಸಿದ್ದು ಹೀಗಿದೆ :

**ಇವನಾರವ, ಇವನಾರವ,**
**ಇವನಾರವನೆಂದೆನಿಸದಿರಯ್ಯ,**
**ಇವ ನಮ್ಮವ, ಇವ ನಮ್ಮವ,**
**ಇವ ನಮ್ಮವನೆಂದೆನಿಸಯ್ಯಾ,**
**ಕೂಡಲಸಂಗಮದೇವಾ,**
**ನಿಮ್ಮ ಮನೆಯ ಮಗನೆಂದೆನಿಸಯ್ಯ.**

ಸಕಲರು 'ಇವ ನಮ್ಮವನೆಂದು' ಬದುಕಿದರೆ ಬದುಕು ಸಮೃದ್ಧಿಯು ವರತೆಯಾಗಿ ಪಸರಿಸಿಕೊಳ್ಳದಿರಲಾರದು. ಇಂದಿನ ದಿನಮಾನಗಳಲ್ಲಿ ಮನುಕುಲವನ್ನು ಒಡೆದು ಒಡೆದು ಛಿದ್ರಗೊಳಿಸಿ ಒಬ್ಬರನ್ನು, ಇನ್ನೊಬರ ವಿರುದ್ಧ ದಂಗೇಳುವಂತೆ, ಮಾಡುವ ನೀತಿಗಳೇ ಪ್ರಚಲಿತದಲ್ಲಿವೆ. ಎಲ್ಲರೂ ನಮ್ಮವರೆನ್ನುವ ಬದಲು ಮತ ಹಾಕುವವರು, ಹಾಕಿದವರ ನಮ್ಮವರೆಂದು ಅಂದುಕೊಳ್ಳುವ ಸ್ಥಿತಿಯು ನಿರ್ಮಾಣಗೊಂಡಿದೆ. ಇದು ಸರ್ವಥಾ ಮಾನವ ಬದುಕಿಗೆ ಸಮೃದ್ಧಿ ತರಲಾರದು.

ಮಾನವನ ಬದುಕಿನ ಸಮೃದ್ಧಿ ಸಹಜಗೊಳ್ಳಬೇಕಾದರೆ ವಿನಯಶೀಲತೆ ಅತ್ಯಂತ ಪ್ರಾಮುಖ್ಯವಾದ ಅಂಶವಾಗಿದೆ. ಬಸವಣ್ಣನವರು ತಮ್ಮ ಬದುಕಿನೊಳಗೆ ವಿನಯಶೀಲತೆಗೆ ಪ್ರಾಮುಖ್ಯತೆ ನೀಡಿದ್ದರಿಂದಲೇ ಅವರು ವಿಶ್ವಮಾನವರಾಗಿ, ಅಣ್ಣನಾಗಿ, ಯುಗದ ಉತ್ಸಾಹವಾಗಿ ಇಂದಿಗೂ ನಮಗೆಲ್ಲ ಮಾರ್ಗಸೂಚಿಯಾಗಿದ್ದಾರೆ. ಅವರು ತಮಗೆ ತಾವೇ ನಿವೇದಿಸಿಕೊಂಡ ವಚನ ಇಲ್ಲಿ ಉಲ್ಲೇಖನೀಯ.

**ಎನಗೆ ನಾನೇ ಹಗೆ ನೋಡಯ್ಯ,**
**ಎನಗೆ ನಾನೇ ಕಳೆ ನೋಡಯ್ಯ,**
**ನಿಮ್ಮ ಸದ್ಭಕ್ತರೊಡನೆ ವಿರೋಧ ಮಾಡಿದಡೆ ಎನ್ನ ಕೊಲುವುದಾಗಿ,**
**ನಿಮ್ಮ ಪುರಾತನರಿಗಂಜಿ ಬೆಸಗೊಂಡಡೆ ಎನ್ನ ಕಾಯ್ದುದಾಗಿ,**
**ಅನ್ಯ ಹಗೆಯಲ್ಲಿ ? ಕೆಳೆಯೆಲ್ಲಿ ?**
**ಬಾಗಿದ ತಲೆಯ ಮುಗಿದ ಕೈಯಾಗಿರಿಸು,**
**ಕೂಡಲಸಂಗಮದೇವಾ.**

ಮಾನವ ಜೀವನ ಸಮೃದ್ಧಿಗೆ, ನಮ್ಮ ಮಾತು ಮನನೀಯವೂ ಮತ್ತು ಸದಾಚಾರ-ಸದ್ಗುಣಕ್ಕೂ ನಿರಂತರ ಬದ್ಧವಾಗಿರಬೇಕೆಂಬುದು ಬಸವಣ್ಣನವರ ಸ್ಪಷ್ಟ ಕಾರ್ಯಸೂತ್ರವಾಗಿದೆ. ನಮ್ಮ ಮಾತು ಹೇಗೆ ಇರಬೇಕು ? ಎಂಬುದನ್ನು ಅವರು ಹೀಗೆ ತಮ್ಮ ವಚನದೊಳಗೆ ಸೂತ್ರಿಕರಿಸಿದ್ದಾರೆ.

**ನುಡಿದಡೆ ಮುತ್ತಿನ ಹಾರದಂತಿರಬೇಕು**
**ನುಡಿದಡೆ ಮಾಣಿಕ್ಯದ ದೀಪ್ತಿಯಂತಿರಬೇಕು**

* ೧೨೧೯, 'ಶ್ರೀ ಶಿವಪ್ರಸಾದ', ಶ್ರೀ ಬಸವೇಶ್ವರ ಬಡಾವಣೆ, ರಾಮತೀರ್ಥನಗರ, ಬೆಳಗಾವಿ-೫೯೦೦೧೬

**ನುಡಿದಡೆ ಸ್ಫಟಿಕದ ಸಲಾಕೆಯಂತಿರಬೇಕು**
**ನುಡಿದಡೆ ಲಿಂಗ ಮೆಚ್ಚಿ ಅಹುದಹುದೆನಬೇಕು,**
**ನುಡಿಯೊಳಗಾಗಿ ನಡೆಯದಿದ್ದಡೆ,**
**ಕೂಡಲಸಂಗಮದೇವನೆಂತೊಲಿವನಯ್ಯಾ?**



ನಮ್ಮ ನಡೆ-ನುಡಿ ನಡೆಯೊಳಗಾದಲ್ಲಿ ಬದುಕಿನ ಸಮೃದ್ಧಿ ಸುಲಭ ಸಾಧ್ಯ. ಆದರೆ ಇಂದು ನಡೆ-ನುಡಿಯೊಳಗೆ ಯಾವುದು ಸಂಬಂಧವಿಲ್ಲದಂತಾಗಿದೆ. ಹೀಗಾಗಿ ಎಲ್ಲ ಇದ್ದೂ ಇಲ್ಲದಂತೆ ಜನರು ಖಿನ್ನತೆಗೆ ಒಳಗಾಗಿದ್ದಾರೆ, ಮಾತಿನಲ್ಲೂ-ಕೃತಿಯಲ್ಲೂ ಕಠಿಣರಾಗಿದ್ದಾರೆ. ನಮ್ಮ ಬಾಳು ಎಲ್ಲ ಮಾತುಗಳನ್ನು ಕಲಿತರೂ, ಬರಡಾಗಿದೆ, ಬಡವಾಗಿದೆ. ಮಾತು, ಮಾತು ಕಲಿತು, ಹೃದಯವಂತಿಕೆಯನ್ನೇ ಮರೆತು ನಿಂತಿರುವಾಗ, ಸಮೃದ್ಧಿ, ಸಂತೃಪ್ತಿ ಸಿಗುವುದಾದರೂ ಹೇಗೆ? ಇದನ್ನೆ ಬಸವಣ್ಣನವರು ಹೀಗೆ ಹೇಳಿದ್ದಾರೆ.

**ನೂರನೋದಿ ನೂರ ಕೇಳಿ ಏನು ?**
**ಆಸೆ ಬಿಡದು, ದೋಷ ಪರಿಯದು**
**ಮಜ್ಜನಕ್ಕೆರೆದು ಫಲವೇನು ?**
**ಮಾತಿನಂತೆ ಮನವಿಲ್ಲದ ಜಾತಿ [ಡಂ]ಬರ ನೋಡಿ**
**ನಗುವ ನಮ್ಮ ಕೂಡಲಸಂಗಮದೇವ.**

ನಮ್ಮ ಮಾತುಗಳು ತಾಳ ತಪ್ಪುತ್ತಲೇ ನಡೆದಿವೆ. ಸ್ವಾರ್ಥಪರತೆಯಿಂದಾಗಿ ಸಮೃದ್ಧಿಯ ಕ್ಷಣಗಳು ಕ್ಷೀಣಿಸುತ್ತಲಿವೆ. ಇದ್ದವರು ಇಲ್ಲದವರು ಎಲ್ಲರೂ ಹತಾಶರಾಗಿ ನೂರಾರು ದೇವರು-ದೇವತೆಗಳಿಗೆ ಮಜ್ಜನವೆರೆವುದು ಇಂದಿಗೂ ಸಾಂಗಗೊಂಡಿದೆ, ಪರಸತಿ, ಪರಧನದ ವ್ಯಾಮೋಹವು ಅತಿಯಾಗಿ ಹೋಗಿದೆ.

ಬಸವಣ್ಣನವರು ಈ ಬದುಕು ಸಮೃದ್ಧಿಯುಕ್ತಗೊಳ್ಳಬೇಕಾದರೆ ಸಂಗ್ರಹ ಬುದ್ಧಿಯಿಂದ ಮುಕ್ತರಾಗಲು ಸೂಚಿಸಿದ್ದಾರೆ.

**ಹೊನ್ನಿನೊಳಗೊಂದೊರೆಯ,**
**ಸೀರೆಯೊಳಗೊಂದೆಳೆಯ**
**ಇಂದಿಂಗೆ ನಾಳಿಂಗೆ ಬೇಕೆಂದೆನಾದಡೆ**
**ನಿಮ್ಮಾಣೆ, ನಿಮ್ಮ ಪ್ರಮಥರಾಣೆ,**
**ನಿಮ್ಮ ಶರಣರಿಗಲ್ಲದೆ ಮತ್ತೊಂದನರಿಯೆ**
**ಕೂಡಲಸಂಗಮದೇವಾ.**

ಮನುಷ್ಯನ ಬದುಕು ಸಮೃದ್ಧಿಯತ್ತ ಸಾಗಬೇಕಾದರೆ, ಅಕ್ರಮವಾಗಿ ಸಂಗ್ರಹಿಸುವುದನ್ನು ನಿಗ್ರಹಿಸುವುದೇ ಸುಮಾರ್ಗವಾಗಿದೆ. ಆಧುನಿಕತೆಯು ಮನುಷ್ಯನನ್ನು ಭೋಗ ಸಂಸ್ಕೃತಿಗೆ ತಳ್ಳಿ, ಅಕ್ರಮದ ದುಡಿಮೆ, ಗಳಿಗೆ, ಬಳಕೆಗೆ ಪ್ರೋತ್ಸಾಹಿಸುತ್ತಲಿದೆ. ಇಂದು ನಮ್ಮ ನ್ಯಾಯಾಲಯಗಳು ಈ ಅಕ್ರಮಗಳನ್ನು ಸರಿಪಡಿಸಲು ಹರಸಾಹಸ ಮಾಡಬೇಕಾಗಿದೆ. ಇದಲ್ಲದೆ ಬೇಕಾದಷ್ಟು ತನಿಖಾ ದಳ, ಜಾಗೃತ ದಳ, ಕಾನೂನುಗಳನ್ನು ಜಾರಿಗೆ ತಂದರೂ ಸಾಲದಂತಾಗಿದೆ. ಕಡು ಬಡತನ ಒಂದೆಡೆ, ಅತಿರಂಜಿತ ಸಿರಿತನ ಇನ್ನೊಂದೆಡೆಗೆ ಕಾಣುವಂತಾಗಿದೆ. ಸಕಲರ ಸಮೃದ್ಧಿ-ಸಮಾನತೆಯ ಕನಸು ನಿತ್ಯವೂ ನುಚ್ಚುನೂರಾಗುತ್ತಲಿದೆ. ಸಿರಿತನ, ವೈಭವವನ್ನೇ ಬಿಂಬಿಸುವ ದೇವರು-ದೇವತೆಗಳ ಜಾತ್ರೆಗಳು, ಉತ್ಸವಗಳು ಸಂಗಮಗೊಂಡಿವೆ, ದೇವರ ಹೆಸರಿನಲ್ಲಿ ಅಕ್ರಮ ಸಂಪತ್ತು ಮತ್ತು ಕೃತ್ಯಗಳನ್ನು ಸಕ್ರಮಗೊಳಿಸಿಕೊಳ್ಳುವುದೂ ನಡೆದಿದೆ. ಇದೆಲ್ಲವನ್ನು ಸರಾಸಗಟಾಗಿ ತಿಸ್ಕರಿಸಿರುವ ಬಸವಣ್ಣನವರ ಕಾರ್ಯ ಸೂಚಿಗಳು, ಸಮೃದ್ಧಿ, ಸಮಾನತೆ ಸಮಾಧಾನಕ್ಕಾಗಿ; ಕಾಯಕ, ದಾಸೋಹ, ಸತ್ಸಂಗಗಳನ್ನು ಪಾಲಿಸಿಕೊಂಡು ಹೋಗುವ ಒಲವಿನ ಒತ್ತಾಯಗಳಾಗಿವೆ, ಮಮತೆಯ ನಿಲುವುಗಳಾಗಿವೆ.

ಮನುಷ್ಯ ಬದುಕಿನ ಸಮೃದ್ಧಿಗೆ ಬಸವಣ್ಣನವರು ಹಾಕಿಕೊಂಡ ನಿತ್ಯ-ನಿಯಮಗಳು ಜನಪರವಾಗಿವೆ, ವೈಚಾರಿಕ-ವೈಜ್ಞಾನಿಕವೂ ಆಗಿವೆ. ಅವರು ಅನುಸರಿಸಿದ ನೇಮ ಇಂದಿನವರಿಗೂ ಸಮೃದ್ಧಿ ತರುವ ಸತ್ವವೇ ಆಗಿದೆ.

**ಬಂದುದು ಕೈಕೊಳ್ಳಬಲ್ಲದೆ ನೇಮ**
**ಇದ್ದುದ ವಂಚನೆಯ ಮಾಡದಿದ್ದಡೆ ಅದು ನೇಮ,**
**ನಡೆದು ತಪ್ಪದಿದ್ದಡೆ ನೇಮ,**





**ನುಡಿದು ಹುಸಿಯದಿದ್ದಡೆ ನೇಮ,**
**ನಮ್ಮ ಕೂಡಲಸಂಗನ ಶರಣರು ಬಂದಡೆ**
**ಒಡೆಯರಿಗೊಡವೆಯ ನೊಪ್ಪಿಸುವುದೇ ನೇಮ.**

ವಂಚನೆಯ ಜಾಲಗಳನ್ನು ಪರಿಹರಿಸಿಕೊಂಡು ಬಾಳಿದಲ್ಲಿ ಮಾತ್ರ ಸಮೃದ್ಧಿಯ ಸೌಭಾಗ್ಯವನ್ನು ಉಳಿಸಿಕೊಳ್ಳಲು ಸಾಧ್ಯ. ನಮ್ಮ ಅಭಿವೃದ್ಧಿ ಅನೇಕ ಆಯಾಮಗಳಲ್ಲಿ ವಂಚನೆ-ಭ್ರಷ್ಟತೆಯು ನುಸುಳಿಕೊಳ್ಳುತ್ತಿರುವುದರಿಂದಲೇ ನಿರೀಕ್ಷಿತ ಗುರಿಗಳನ್ನು ತಲುಪಲಾಗುತ್ತಿಲ್ಲ. ನಮ್ಮ, ನಮ್ಮ ಕೆಲಸ-ಕಾರ್ಯಗಳಲ್ಲಿ ಬದ್ಧತೆ ಕಾಯ್ದುಕೊಂಡು ಹೋದಲ್ಲಿ ಈ ಬದುಕು ಸಮೃದ್ಧಿಯ ಬೀಡಾಗುವುದನ್ನು ಯಾವ ದುಷ್ಟ ಶಕ್ತಿಯು ತಡೆಯಲಾರದು.

ಎಂದಿನಂತೆ ಇಂದು ಮನುಷ್ಯ ಕುಲವು, ಪದವಿ-ಪಟ್ಟಕ್ಕಾಗಿ ಹಪಹಪಿಸುತ್ತ ಬದುಕಿನ ಬವಣೆಯನ್ನು ಹೆಚ್ಚಿಸಿಕೊಳ್ಳುತ್ತಲಿದೆ. ಆದರೆ ಬಸವಣ್ಣನವರು ಇಂಥ ಹಪಹಪಿತನ ಪ್ರಗತಿಗೆ, ಸಮೃದ್ಧಿ, ಸಂಪತ್ತಿಗೆ ಮಾರಕವೆಂದು ಹೇಳಿದ್ದಾರೆ.

ಅಧಿಕಾರ ಚಲಾವಣೆಗಾಗಿಯೇ ಎಲ್ಲೆಲ್ಲೂ-ಎಲ್ಲರಲ್ಲೂ ಪೈಪೋಟಿ ಇದೆ. ಅಧಿಕಾರದಾಹವು ಮನುಷ್ಯ ಬದುಕನ್ನು ಭಯೋತ್ಪಾದನೆ, ಆತಂಕವಾದ, ಧರ್ಮಾಂಧತೆಗೆ ದಾರಿ ಮಾಡುವ ಕಾಲದೊಳಗೆ ನಾವೆಲ್ಲ ಇದ್ದೇವೆ, ನಿಜವಾದ ಜನಸೇವೆಯೇ ಅಧಿಕಾರದ ಸೊಗಸಾಗಿದೆ. ಇದೇ ಸಮೃದ್ಧಿಯ ವಾಹಕವೂ ಆಗಿದೆ.

ಬಸವಣ್ಣನವರು, ಮನುಕುಲದ ಬದುಕು ಇಹದ ಬದುಕನ್ನು ಅತ್ಯಂತ ಪ್ರೀತಿ, ಆದರ ಗೌರವಯುತವಾಗಿ ಬೆಳಗಿಸಿಕೊಳ್ಳುವ ಕಾರ್ಯಸೂಚಿಯನ್ನೇ ತಮ್ಮ ಅನುಭವದ ವಚನಗಳಲ್ಲಿ ಸಾಕ್ಷೀಕರಿಸಿದ್ದಾರೆ. ಕಾಯಕ ನಿಷ್ಠೆಯಿಂದಲೇ ಬದುಕುವ ದಾರಿಯನ್ನು ನಿಖರಗೊಳಿಸಿದ್ದಾರೆ. ಮನುಷ್ಯ-ಮನುಷ್ಯರೊಳಗೆ ಅನ್ಯೂನ್ಯ ಸಂಬಂಧಗಳನ್ನು ಗಟ್ಟಿಗೊಳಿಸುವ ಬಸವಣ್ಣನವರು ಮಾನವ ಹಕ್ಕುಗಳನ್ನು ಅನುಷ್ಠಾನಗೊಳಿಸುವ ಕಾರ್ಯ ಸೂಚಿಯಂತೆ ಬದುಕಿದ ಮಹಾನುಭಾವರಲ್ಲಿಯೇ ಅಗ್ರಮಾನ್ಯರಾಗಿದ್ದಾರೆ. ಅವರ ನಡೆ-ನುಡಿಗಳನ್ನು ಅನುಸರಿಸಿಕೊಂಡು ಹೋಗುವ ಹೆಜ್ಜೆಗಳಲ್ಲಿಯೇ ಸಮೃದ್ಧಿಯೂ ಇದೆ. ಸಂಭ್ರಮವೂ ಇದೆ.

* * *

## ಅಭಿನಂದನೆ



### ಕನ್ನಡದ ಹೆಮ್ಮೆ
### ಕುಮಾರಿ ನಂದಿನಿ ಕೆ.ಆರ್.

ಕನ್ನಡಿಗರಿಗೆಲ್ಲ ಸಂತಸದ ಸುದ್ದಿ! ಭಾರತದ ಲೋಕಸೇವಾ ಆಯೋಗ ನಡೆಸುವ ಅಖಿಲ ಭಾರತ ಸೇವೆಗಳ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ರಾಷ್ಟ್ರದಲ್ಲೇ ಪ್ರಥಮ ಸ್ಥಾನ ಪಡೆದ ಕನ್ನಡ ನೆಲದ ಅಭಿಮಾನಕ್ಕೆ ಪಾತ್ರರಾಗಿದ್ದಾರೆ ಕು|| ನಂದಿನ ಕೆ.ಆರ್. ಅವರು.

ಕಳೆದ ಸಾಲಿನ (೨೦೧೬) ಸ್ಪರ್ಧಾತ್ಮಕ ಪರೀಕ್ಷೆಗಾಗಿ ರಾಷ್ಟ್ರಾದ್ಯಂತ ಇದ್ದ ಸುಮಾರು ಮೂರು ಲಕ್ಷ ಅಭ್ಯರ್ಥಿಗಳನ್ನು ಮೀರಿದ ಈ ಪ್ರತಿಭಾವಂತೆ ಹುಟ್ಟಿದ್ದು ಚಿನ್ನದ ಜಿಲ್ಲೆ ಎಂದೇ ಪ್ರಸಿದ್ಧವಾದ ಕೋಲಾರ ಜಿಲ್ಲೆಯ ಕೆಂಬಾಡಿ ಗ್ರಾಮ. ತಂದೆ ಶ್ರೀ ಎಂ. ರಮೇಶ್, ಸರ್ಕಾರಿ ಶಾಲೆಯ ಶಿಕ್ಷಕರು. ಈಗಾಗಲೇ ಕೇಂದ್ರ ಲೋಕಾ ಸೇವಾ ಆಯೋಗ ನಡೆಸುವ ಪರೀಕ್ಷೆಯಲ್ಲಿ ಭಾರತ ಕಂದಾಯ ಸೇವೆಗೆ ಆಯ್ಕೆಯಾಗಿ ತರಬೇತಿ ಪಡೆಯುತ್ತಿದ್ದಾರೆ. ಇಂಜನಿಯರ್ ಪದವೀಧರೆಯಾದ ನಂದಿನಿ ಅವರು ಪರೀಕ್ಷೆಯಲ್ಲಿ ಕನ್ನಡವನ್ನು ಐಚ್ಛಿಕ ವಿಷಯವನ್ನಾಗಿ ಆಯ್ಕೆ ಮಾಡಿಕೊಂಡಿದ್ದರು.

ಶಾಲಾ ದಿನಗಳಿಂದಲೂ ಭಾರತೀಯ ಸಿವಿಲ್ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಜನಸೇವೆ ಮಾಡಬೇಕೆಂಬ ಆಶಯವನ್ನು ಹೊಂದಿದ್ದ ನಂದಿನಿಯವರು ಕಠಿಣ ಪರಿಶ್ರಮದಿಂದ ಕನಸನ್ನು ನನಸಾಗಿಸಿ ಕೊಂಡಿದ್ದಾರೆ. ೨೦೦೦ನೇ ಸಾಲಿನಲ್ಲಿ ಕುಮಾರಿ ವಿಜಯಲಕ್ಷ್ಮೀ ಬಿದರಿ ಅವರು ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಮೊದಲ ರ್‍ಯಾಂಕ್ ಪಡೆದು ಕನ್ನಡಿಗರ ಪ್ರೀತಿಗೆ ಪಾತ್ರರಾಗಿದ್ದುದನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳಬಹುದು.

ಉನ್ನತ ಧ್ಯೇಯದರ್ಶನಗಳೊಂದಿಗೆ, ಸುತ್ತಣ ಬದುಕನ್ನು ಸೂಕ್ಷ್ಮವಾಗಿ ಗಮನಿಸಿ ತಮ್ಮ ಜ್ಞಾನದ ಕ್ಷಿತಿಜವನ್ನು ವಿಸ್ತಾರಗೊಳಿಸಿಕೊಂಡಿರುವ ನಂದಿನಿ ಕೆ.ಆರ್. ಅವರ ಈ ಶ್ರೇಷ್ಠ ಸಾಧನೆಗೆ 'ಸಿದ್ಧಗಂಗಾ' ಅಭಿನಂದಿಸುತ್ತದೆ.

# ಅಟ್ಲಾಂಟ ಮತ್ತು ವಾರ್ನರ್ ರಾಬಿನ್ಸ್ (ಜಾರ್ಜಿಯ ರಾಜ್ಯ) ಪ್ರವಾಸ

– ಬಿ.ನಂ. ಚನ್ನಪ್ಪ *

**ಪೂ**ರ್ವಯೋಜಿತ ಕಾರ್ಯಕ್ರಮದಂತೆ ನಾನು ಮತ್ತು ಡಾ. ರವಿ ನಮ್ಮ ಚಿಕ್ಕಮ್ಮನ ಮಗ ಚಂದ್ರ ಕಣನೂರ್, ಪ್ರೊಫೆಸರ್ ಫೋರ್ಟ್ ವ್ಯಾಲಿ ವಿಶ್ವವಿದ್ಯಾನಿಲಯ, ವಾಸಿಸುತ್ತಿದ್ದ ಜಾರ್ಜಿಯ ಪ್ರಾಂತದ ವಾರ್ನರ್ ರಾಬಿನ್ಸ್ ಮತ್ತು ಅಟ್ಲಾಂಟ ನಗರದಲ್ಲಿರುವ ನನ್ನ ನಾದಿನಿಯ ಮಗಳು ಸುವರ್ಣ, ಅವರಲ್ಲಿ ಹೋಗಲು, ದಿನಾಂಕ ೦೨.೧೦.೨೦೧೪ (ಗುರುವಾರ) ದಂದು ಬಾಸ್ಟನ್‌ನಿಂದ ಅಟ್ಲಾಂಟಾಗೆ ಡೆಲ್ಟ ವಿಮಾನದಲ್ಲಿ ಪ್ರಯಾಣಿಸಿದೆವು. ಅಟ್ಲಾಂಟದಿಂದ ಬಾಡಿಗೆ ಕಾರಿನಲ್ಲಿ ೧೨೦ ಮೈಲಿ ದೂರದ ವಾರ್ನರ್ ರಾಬಿನ್ಸ್‌ಗೆ ಪ್ರಯಾಣ ಮಾಡಿ ಚಂದ್ರ ಅವರ ಮನೆ ಸೇರಿದೆವು. ಇದೊಂದು ಗಡಿಬಿಡಿಯಿಲ್ಲದ ಸುಂದರ ಪಟ್ಟಣ. ನಾನು ಅಲ್ಲಿಗೆ ೧೯೫೫ರಲ್ಲಿ ಭೇಟಿ ನೀಡಿದ್ದೆ. ಬೆಂಗಳೂರಿನಲ್ಲಿ ನಾವಿಬ್ಬರು ಓದುತ್ತಿದ್ದಾಗಿನ ಮಧುರ ನೆನಪುಗಳೊಡನೆ ಇಡೀ ದಿನ ನಾವು ನಮ್ಮ ಬದುಕಿನಲ್ಲಿ ನಡೆದು ಬಂದ ದಾರಿಯ ವಿಶ್ಲೇಷಣೆಯಲ್ಲಿ ನಿರತರಾಗಿದ್ದೆವು.

ಚಂದ್ರ ಕಣನೂರ್ ಫೋರ್ಟ್ ವ್ಯಾಲಿ ಯೂನಿವರ್ಸಿಟಿಯಲ್ಲಿ ಮನಶಾಸ್ತ್ರ ಮತ್ತು ಕೌನ್ಸಲಿಂಗ್ (ಸಮಾಲೋಚನಾ ಸಲಹೆಗಾರ)ನಲ್ಲಿ ಪದವಿಯೇತ್ತರ (Post graduate) ವಿದ್ಯಾರ್ಥಿಗಳಿಗೆ ಪ್ರೊಫೆಸರ್ ಆಗಿ ಕೆಲಸ ಮಾಡುತ್ತಿದ್ದಾನೆ. ೩೭ ವರ್ಷಗಳಿಂದ ಒಂಟಿಯಾ ಗಿದ್ದಾನೆ. ಮೂರು ಮಕ್ಕಳು ಬೇರೆ ಬೇರೆ ಸ್ಥಳಗಳಲ್ಲಿ ತಮ್ಮ ಜೀವನ ರೂಪಿಸಿಕೊಳ್ಳುತ್ತಿದ್ದಾರೆ. ಸ್ವತಂತ್ರ ಮನೋಭಾವವುಳ್ಳ ಚಂದ್ರ ಕಣನೂರ್, ೫೪ ವರ್ಷಗಳ ಹಿಂದೆ ಅಮೆರಿಕಕ್ಕೆ ಬಂದು ಬೇರೆ ಬೇರೆ ವಿಶ್ವ ವಿದ್ಯಾನಿಲಯಗಳಲ್ಲಿ ಕೆಲಸ ಮಾಡಿ, ಈಗ ವಾರ್ನರ್ ರಾಬಿನ್ಸ್‌ನಲ್ಲಿ ನೆಲಸಿದ್ದಾರೆ. ಎಂಭತ್ತು ವರ್ಷ ವಯಸ್ಸಿನಲ್ಲಿಯೂ ಕೆಲಸ ಮಾಡುತ್ತ ಬದುಕು ಸಾಗಿಸುತ್ತಿದ್ದಾರೆ.

ಮಾರನೆ ದಿನ (೩.೧೦.೨೦೧೪), ಚಂದ್ರ ಅವರ ಜೊತೆ ಪೋರ್ಟ್ ವ್ಯಾಲಿ ವಿಶ್ವವಿದ್ಯಾನಿಲಯಕ್ಕೆ ಭೇಟಿ ಕೊಟ್ಟೆವು. ಇದು ೫೦೦೦ ಎಕರೆ ವಿಸ್ತೀರ್ಣದ ಕ್ಯಾಂಪಸ್ ಹೊಂದಿದೆ. ಇಲ್ಲಿ ೩೩ ವಿಷಯಗಳಲ್ಲಿ ಪದವಿ ಮತ್ತು ಪದವಿಯೋತ್ತರ ವಿದ್ಯಾಭ್ಯಾಸಕ್ಕೆ ಅವಕಾಶವಿದೆ. ಅಲ್ಲಿ ಚಂದ್ರ ಅವರ ಕೆಲವು ಸಹೋದ್ಯೋಗಿಗಳ ಪರಿಚಯ ಮಾಡಿಕೊಂಡೆವು. ಭಾರತೀಯರಾದಿಯಾಗಿ ವಿವಿಧ ರಾಷ್ಟ್ರಗಳಿಂದ ಬಂದು ಇಲ್ಲಿ ಉಪನ್ಯಾಸಕರಾಗಿ ಅನೇಕರು ಕೆಲಸ ಮಾಡುತ್ತಿದ್ದಾರೆ. ಇಲ್ಲಿ ಹೆಚ್ಚಿನವರು ಆಫ್ರಿಕನ್ ಅಮೆರಿಕನ್ನರು (Black Americans). ಸಾಯಂಕಾಲ ಕೆಲವು ಮಾಲ್‌ಗಳಿಗೆ ಹೋಗಿ ಬಂದೆವು. ಇದು ಅಮೆರಿಕದ ಅತಿ ದೊಡ್ಡ ವಾಯು ಪಡೆಯ ಕೇಂದ್ರ ಸ್ಥಳವಾಗಿದೆ. ಗುಜರಾತಿನ ಜನರು (Pasels) ಹೆಚ್ಚಾಗಿ ವಾಸಿಸುತ್ತ ಅನೇಕ ವಾಣಿಜ್ಯ ವ್ಯವಹಾರಗಳಲ್ಲಿ (food Chains, Mosels etc) ತೊಡಗಿಸಿಕೊಂಡಿದ್ದಾರೆ. ಒಟ್ಟಿನಲ್ಲಿ ಬಹಳ ದಿನಗಳ ಮೇಲೆ ಆತ್ಮೀಯ ಬಂಧವೊಬ್ಬರೊಡನಿದ್ದು, ಅವರ ಆತಿಥ್ಯ ಸ್ವೀಕರಿಸಿದ ತೃಪ್ತಿಯಿಂದ ಅಟ್ಲಾಂಟಾಗೆ ಪ್ರಯಾಣಿಸಿದೆವು.

**ಅಟ್ಲಾಂಟ** : ದಿನಾಂಕ ೦೪.೧೦.೨೦೧೪ ರಂದು ವಾರ್ನರ್ ರಾಬಿನ್ಸ್‌ನಿಂದ ಹೊರಟು ಅಟ್ಲಾಂಟಾದ ಹೊರವಲಯದಲ್ಲಿ ವಾಸಿಸುತ್ತಿರುವ ನಮ್ಮ ಬಂಧುಗಳಲ್ಲಿಗೆ ಹೋದೆವು. ಸುವರ್ಣ ಮತ್ತು ಅವಳ ಪತಿ ವೀರು ಅವರು ನಮ್ಮನ್ನು ಆತ್ಮೀಯವಾಗಿ ಸ್ವಾಗತಿಸಿದರು. ದೂರದೇಶದಲ್ಲಿ ನಮ್ಮವರನ್ನು ಅದರಲ್ಲೂ ಅವರ ಸುಂದರ ಬದುಕನ್ನು ನೋಡಿದಾಗ ಆಗುವ ಸಂತೋಷ ವರ್ಣಿಸಲಾಗದು. ಅವರ ವಾಸಿಸುವ ಮನೆಯೂ ಕೂಡ ಸಾಕಷ್ಟು ದೊಡ್ಡದ್ದಾಗಿದ್ದು ಸುಂದರವಾಗಿ ಕಟ್ಟಿದ್ದಾರೆ. ಸುವರ್ಣ ದಂಪತಿಗಳು ತಮ್ಮ ಒಬ್ಬಳೇ ಮಗಳೊಡನೆ ಮಧ್ಯಾಹ್ನದ ಮೇಲೆ, ಜಾರ್ಜಿಯಾದ ಪ್ರಸಿದ್ಧ ಪ್ರವಾಸಿ ಆಕರ್ಷಣೆಯ ತಾಣ **"ಸ್ಟೋನ್ ಮೌಂಟೈನ್"** ನೋಡಿ ಬರಲು ಕರೆದೊಯ್ದರು.

* ನಿವೃತ್ತ ಮುಖ್ಯ ಇಂಜಿನಿಯರ್, ನಂ. ೧೧೫, ೧೧ನೇ ಮುಖ್ಯರಸ್ತೆ, ಪಶ್ಚಿಮ ಕಾರ್ಡ್‌ರಸ್ತೆ, ೨ನೇ ಹಂತ, ಬೆಂಗಳೂರು-೫೬೦ ೦೮೬





**ಸ್ಟೋನ್ ಮೌಂಟೈನ್ ಪಾರ್ಕ್** : ಸ್ಟೋನ್ ಮೌಂಟೈನ್ ಪಾರ್ಕ್ ೩೨೦೦ ಎಕರೆಗಳಷ್ಟು ವಿಸ್ತಾರವಾಗಿದೆ. ಇದು ಭೂಮಿಯ ಮಟ್ಟದಿಂದ ೮೨೫ ಅಡಿ ಎತ್ತರವಿದೆ. (ಇದು ಭೂಮಿಯ ಒಳಗಡೆ ಏಳು ಮೈಲಿಯಷ್ಟು ಆಳವಾಗಿದೆ). ಇದು ಜಾರ್ಜಿಯಾದ ಆಕರ್ಷಣೆಯ ಪ್ರವಾಸಿ ತಾಣವಾಗಿದ್ದು ಪ್ರತಿ ವರ್ಷ ನಾಲ್ಕು ದಶಲಕ್ಷಕ್ಕಿಂತ ಹೆಚ್ಚು ಪ್ರವಾಸಿಗಳು ಇಲ್ಲಿಗೆ ಭೇಟಿ



ಕೊಡುತ್ತಾರೆ. ಇಲ್ಲಿನ ಏಕ ಶಿಲಾ ಬೆಟ್ಟದ ಇಳಿಜಾರಿನಲ್ಲಿ (slope) ಪ್ರಪಂಚದ ಅತಿ ದೊಡ್ಡ ಉಬ್ಬಿದ ಚಿತ್ರಗಳ ಕೆತ್ತನೆ ಮಾಡಲಾಗಿದೆ. (Largest Relief Sculpure in the World).

**ಚರಿತ್ರೆ** : ಸ್ಟೋನ್ ಮೌಂಟೈನ್ ಪ್ರದೇಶದಲ್ಲಿ ೧೦,೦೦೦ ವರ್ಷಗಳ ಹಿಂದೆ ಇಲ್ಲಿ ಜನರು ವಾಸಿಸುತ್ತಿದ್ದರೆಂದು ತಿಳಿದು ಬಂದಿದೆ. ೧೭೦೦ನೆ ಇಸವಿಯ ಆಜುಬಾಜು "ಮಸ್ಕೋಗಿ ಇಂಡಿಯನ್ಸ್" ಎಂಬ ಜನರು ಪರ್ವತದ ಸುತ್ತಮುತ್ತ ನೆಲೆಸಿದ್ದರು. ಅಧ್ಯಕ್ಷ ಜಾಜ್ ವಾಷಿಂಗ್ಟನ್‌ರವರು ಪರ್ವತದ ಸುತ್ತ ಇರುವ ಜಾಗವನ್ನು ಕಲ್ಲು ತೆಗೆಯಲು (Quarrying) ವಶಪಡಿಸಿಕೊಂಡರು. ಇಲ್ಲಿನ ಗ್ರಾನೈಟ್ ಕಲ್ಲನ್ನು ತೆಗೆದು ವಾಷಿಂಗ್ಟನ್‌ನಲ್ಲಿನ "ಕ್ಯಾಪಿಟಲ್ ಕಟ್ಟಡ ಮತ್ತು ಜಾರ್ಜಿಯ ರಾಜ್ಯದ ಕ್ಯಾಪಿಟಲ್ ಕಟ್ಟಡ ಕಟ್ಟಲು ಉಪಯೋಗಿಸಲಾಯಿತು. ಈ ಪರ್ವತದ ಮಾಲೀಕರಾದ 'ಸ್ಯಾಮ್ಯುಯಲ್ ವೆನಬಲ್' ರವರಿಂದ ಇದನ್ನು ೧೯೫೮ರಲ್ಲಿ ಜಾರ್ಜಿಯ ರಾಜ್ಯ ಸರ್ಕಾರವು ಖರೀದಿಸಿತು. ಸ್ಟೋನ್ ಮೌಂಟೈನ್ ಪಾರ್ಕ್‌ನ್ನು ರಾಜ್ಯವು ಅಭಿವೃದ್ಧಿಪಡಿಸುವುದರ ಜೊತೆಗೆ "ಕಾನ್ಫೆಡರೇಟ್ ಮೆಮೋರಿಯ ಕೆತ್ತನೆ"ಯ (Confederate Memorial Carving) ಕೆಲಸವನ್ನು ಮುಗಿಸಲಾಯಿತು. ಇದರ ಮೇಲೆ ಕೆತ್ತಲಾಗಿರುವ ಮೂರು ಜನರು ಅಮೆರಿಕ ನಾಗರಿಕ ಕ್ರಾಂತಿಯ (Civil War Heroes) ನಾಯಕರು. ಈ ನಾಗರಿಕ ಕ್ರಾಂತಿಯ ಪರಿಣಾಮವಾಗಿ, ಎಲ್ಲ ಸಣ್ಣ ಸಣ್ಣ ರಾಜ್ಯಗಳು, ಗುಂಪುಗಳು ಒಟ್ಟುಗೂಡಿ ವಿದೇಶಿ ಸಾಮ್ರಾಜ್ಯ ಶಾಹಿಗಳೊಡನೆ ಜಾರ್ಜ್ ವಾಷಿಂಗ್ಟನ್‌ರವರ ನೇತೃತ್ವದಲ್ಲಿ ಹೋರಾಡಿ ಅಮೆರಿಕ ಸಂಯುಕ್ತ ಸಂಸ್ಥಾನವು (USA) ಉದಯವಾಯಿತು.

**ಕಾನ್ಫಿಡರೇಟ್ ಸ್ಮಾರಕದ ಕೆತ್ತನೆ** : ಅಮೆರಿಕದ ಈ ಸ್ವಾತಂತ್ರ್ಯ ಹೋರಾಟದ ಪ್ರಮುಖರಾದ ಮೂವರು ವ್ಯಕ್ತಿಗಳ ಪ್ರತಿಮೆಗಳನ್ನು ಪರ್ವತದ ಮೇಲೆ ಕೆತ್ತಲು ಉದ್ದೇಶಿಸಲಾಯಿತು. ಕುದುರೆಗಳ ಮೇಲೆ ಕುಳಿತ ಭಂಗಿಯಲ್ಲಿ, ಬ್ಲಾಕ್ ಜಾಕ್ ಎಂಬ ಕುದುರೆ ಮೇಲೆ ಜಫರ್ಸನ್ ಡೇವಿಡ್, ಟ್ರಾವಲರ್ ಮೇಲೆ ಜನರಲ್



ರಾಬರ್ಟ್ ಇ ಲೀ, ಮತ್ತು ಸೋರೆಲ್ ಮೇಲೆ ಥಾಮಸ್ ಸ್ಟೋನ್‌ವಾಲ್ ಜಾಕ್ಸನರ್ರ ಚಿತ್ರಗಳನ್ನು ಒಟ್ಟುಗೂಡಿಸಿ ಕೆತ್ತಲಾಗಿದೆ. ಈ ಕೆತ್ತನೆಗೆ "ಕಾನ್ಫಿಡರೇಟ್ ಮೆಮೋರಿಯಲ್ ಕಾರ್ವಿಂಗ್" ಎಂದು ಕರೆಯಲಾಗಿದೆ. ಪರ್ವತವು ೫೮೩ ಎಕರೆಗಳಿದ್ದು, ಸುತ್ತಲೂ ಹಸಿರುಕಾಡು, ಸುಂದರ ಸರೋವರಗಳು, ಹರಿಯುವ ಸಣ್ಣ ಸಣ್ಣ ಹೊಳೆಗಳಿಂದಾವೃತವಾಗಿ ಎಲ್ಲಾ ಜನರನ್ನು ತನ್ನತ್ತ ಸೆಳೆಯುತ್ತಿದೆ. ಈ ಸುಂದರ ಕೆತ್ತನೆಗಳು ಎಲ್ಲರನ್ನೂ ಆಕರ್ಷಿಸುತ್ತಿವೆ.

ಇಲ್ಲಿನ ಕೆತ್ತನೆಯ ಸ್ಮಾರಕವು ೯೦ ಅಡಿ X ೧೯೦ ಅಡಿಗಳಷ್ಟು ವಿಸ್ತಾರವಾಗಿದ್ದು, ಎರಡು ಪುಟ್‌ಬಾಲ್ ಮೈದಾನದಷ್ಟಿದ್ದು, ಮೌಂಟ್ ರಷ್ಮೋರ್ ಕೆತ್ತನೆಗಿಂತ ದೊಡ್ಡದಾಗಿದೆ. ಇದನ್ನು ಈ ಮೂರು ವ್ಯಕ್ತಿಗಳ ಹೆಣ್ಣು ಮಕ್ಕಳ ಆಶಯದಂತೆ (೧೯೧೨ ರಲ್ಲಿ), ಈ ಯೋಜನೆ

ಪ್ರಾರಂಭವಾದ ೬೦ ವರ್ಷಗಳಾದ ಮೇಲೆ ಮುಗಿಸಲಾಯಿತು. ಪ್ರಸಿದ್ಧ ಶಿಲ್ಪಿ ಗುಟ್ಸನ್ ಬೋರ್ಗಮ್ (ಮೌಂಟ್ ರಷ್ಮೋರ್‌ನ ಶಿಲ್ಪಿ) ೧೯೨೩ರಲ್ಲಿ ತನ್ನ ಸಹಚರರೊಡನೆ ಈ ಕೆಲಸ ಪ್ರಾರಂಭಿಸಿದನು. ರಾಬರ್ಟ್ ಇ ಲೀ ಅವರ ಶಿರೋಭಾಗವನ್ನು ಮುಗಿಸಿ, ಅಲ್ಲಿನ ವ್ಯವಸ್ಥಾಪಕರೊಡನೆ ಭಿನ್ನಾಭಿಪ್ರಾಯ ತಲೆದೋರಿ, ಇಲ್ಲಿಂದ ರಷ್ಮೋರ್ ಸ್ಮಾರಕದ ಕೆಲಸಕ್ಕೆ ಹೊರಟು ಹೋದನು. ನಂತರ ಆಗಸ್ಟ್ ಸೆಲೂಕೆಮನ್ ಎಂಬ ಶಿಲ್ಪಿಯು ೧೯೨೫ರಲ್ಲಿ ಪ್ರಾರಂಭಿಸಿ ಈ ಮೂರು ವ್ಯಕ್ತಿಗಳ ಚಿತ್ರಗಳ ಕೆತ್ತನೆಯನ್ನು ಮುಂದುವರಿಸಿದನು. ಕೆಲಸವು ಬಹಳ ನಿಧಾನವಾಗಿ ನಡೆಯುತ್ತಿದ್ದು ೩೬ ವರ್ಷಗಳಾದರೂ ಪೂರ್ಣವಾಗಲಿಲ್ಲ. ಅಂತಿಮವಾಗಿ ೧೯೬೪ರಲ್ಲಿ ಮೂರನೆ ಶಿಲ್ಪಿ ವಾಕರ್ ಕರ್ಕ್‌ಲ್ಯಾಂಡ್ ಹ್ಯಾನ್ ಕಾಕ್‌ರವರಿಗೆ ವಹಿಸಲಾಯಿತು. ಕೆತ್ತನೆ ಮುಗಿದು ಮೇ ೯, ೧೯೭೦ ರಲ್ಲಿ ಅರ್ಪಣಾ ಸಮಾರಂಭ (Delication Ceremony) ಏರ್ಪಡಿಸಲಾಗಿತ್ತು. ಸಂಪೂರ್ಣವಾಗಿ ೧೯೭೨ ರಲ್ಲಿ ಮುಗಿಸಲಾಯಿತು. ಬೆಟ್ಟದ ಮೇಲೆ ಕೆತ್ತನೆ ಮಾಡಲು ಸೊಂಟದ ಪಟ್ಟಿಗಳನ್ನು, ರಕ್ಷಾ ಕವಚಗಳನ್ನು ಉಪಯೋಗಿಸಲಾಗಿತ್ತು.

**ಪರ್ವತದ ಶಿಖರಕ್ಕೆ ಹೋಗಲು ಕೇಬಲ್ ಕಾರ್:** ಪರ್ವತ ಶೃಂಗವನ್ನು ಮುಟ್ಟಲು ೮೨೫ ಅಡಿ ಎತ್ತರ ಹತ್ತಬೇಕು. ಆದ್ದರಿಂದ ಮೇಲೆ ಹೋಗಲು ೧೯೬೨ರಲ್ಲಿ, ಸ್ವಿಟ್ಜರ್ಲೆಂಡ್‌ನಿಂದ ಆಮದು ಮಾಡಿಕೊಂಡ "ಕೇಬಲ್ ಕಾರ್"ನ್ನು ಅಳವಡಿಸಲಾಯಿತು. ಕೇವಲ ಮೂರು ನಿಮಿಷಗಳ ಪ್ರಯಾಣ. ಸುಮಾರು ೮೦ ಜನರನ್ನು ಕೊಂಡೊಯ್ಯುತ್ತದೆ. ಹೋಗಿ ಬರಲು ಒಂದು ಮೈಲಿಯ ಪ್ರಯಾಣದ ಈ ಕೇಬಲ್ ಕಾರ್, ಅಮೆರಿಕದಲ್ಲಿಯೇ ಅತ್ಯಂತ ಉದ್ದವಾದದ್ದು. ಇಂದು ಈ ಕೇಬಲ್ ಕಾರ್ ಪ್ರಯಾಣವು ಎಲ್ಲರಿಗೂ ಪ್ರಿಯವಾದ ಆಕರ್ಷಣೆ. ಪರ್ವತದ ಮೇಲಿನಿಂದ ಸುತ್ತಲಿನ ಪ್ರದೇಶದ ಸುಂದರ ನೋಟದ ಸವಿಯನ್ನು ಅರವತ್ತು ಮೈಲಿ ದೂರದವರೆಗೆ ಸವಿಯಲು ಪ್ರವಾಸಿಗಳು ಕಾತುರತೆಯಿಂದ ಕಾಯುತ್ತಿರುತ್ತಾರೆ.

**ರೈಲು ಪ್ರಯಾಣ :** ಪರ್ವತದ ಸುತ್ತಲೂ ರೈಲು ಮಾರ್ಗವನ್ನು ಹಾಕಲಾಗಿದೆ. ಸುಮಾರು ಐದು ಮೈಲಿಗಳ ಸಂಚಾರಾರ್ಥ ವಿಹಾರದ ಪ್ರಯಾಣ ಮಾಡಲು ಅನುಕೂಲವಿದೆ. ಪ್ರಯಾಣದುದ್ದಕ್ಕೂ ಸುಂದರ ಪರಿಸರದ ಸಾನಿಧ್ಯ ಮನಸ್ಸಿಗೆ ಮುದ ನೀಡುತ್ತದೆ.

**ಪ್ರಾಕೃತಿಕ ಪರಿಸರ :** ಈ ಪರ್ವತ ಮತ್ತು ಸುತ್ತಲಿನ ೩೨೦೦ ಎಕರೆ ಪ್ರದೇಶವು (ವನದ ಮೂರನೆ ಎರಡರಷ್ಟು) ಗಂಭೀರವಾಗಿ ನಿಂತಿರುವ ಎತ್ತರದ ಪರ್ವತವಲ್ಲದೆ, ಮರಗಳಿಂದ ಕೂಡಿದ ಕಾಡು ಪ್ರದೇಶ, ಹಚ್ಚ ಹಸುರಿನ ಹುಲ್ಲುಗಾವಲುಗಳನ್ನು ಮತ್ತು ಬಣ್ಣ ಬಣ್ಣದ ಕಾಡುಹೂಗಳನ್ನು (ಕಾರ್ಡಿನಲ್ ಪ್ಲವರ್), ಕಿತ್ತಲೆ ಮತ್ತು ನೀಲಿ ಬಣ್ಣದ "ಈಸ್ಟರನ್ ಬ್ಲೂ ಬರ್ಡ್" ಸುಂದರ ಪಕ್ಷಿಗಳಿಂದ ಕೂಡಿದ ಪ್ರಾಕೃತಿಕ ಸಂಪತ್ತನ್ನು ಹೊಂದಿ ಚಿತ್ತಾಕರ್ಷಕವಾಗಿದೆ. ಮಾಕಿಂಗ್ ಬರ್ಡ್, ಬ್ರೌನ್ ತ್ರ್ಯಾಷರ್ಸ್ ( ಜಾರ್ಜಿಯಾದ ಪ್ರಾಂತ ಪಕ್ಷಿ – Georgia State bird), ಗೋಲ್ಡ್ ಫಿಂಚಸ್, ಬ್ಲೂ ಗ್ರಾಸ್ ಬೀಕ್ಸ್ ಮೊದಲಾದ ಬಗೆ ಬಗೆಯ ಪಕ್ಷಿಗಳನ್ನು ಸಾಂಗ್ ಬರ್ಡ್ ಹ್ಯಾಬಿಟಾಟ್ ಪ್ರದೇಶದಲ್ಲಿ ನೋಡಬಹುದು. ಬಿಳಿ ಬಣ್ಣದ ಬಾಲವುಳ್ಳ ಜಿಂಕೆಗಳು ಸುತ್ತಲಿನ ಕಾಡು ಪ್ರದೇಶದಲ್ಲಿ ಕಾಣಸಿಗುತ್ತವೆ.

**ಇಲ್ಲಿ ನಡೆಯುವ ಪ್ರದರ್ಶನಗಳು ಮತ್ತು ಆಕರ್ಷಣೆಗಳು :** ಅತ್ಯಂತ ಪ್ರಮುಖ ಆಕರ್ಷಣೆಯೆಂದರೆ ೧೯೮೩ ರಿಂದ ಇಲ್ಲಿ ನಡೆಯುವ "ಲೇಸರ್ ಶೋ ಸ್ಪೆಕ್ಟ್ಯಾಕ್ಯುಲರ್". ಸುಮಾರು ೪೫ ನಿಮಿಷಗಳ ಕಾಲ





ನಡೆಯುವ ಪ್ರಪಂಚದ ಅತ್ಯಂತ ದೀರ್ಘ ಲೇಸರ್ ಪ್ರದರ್ಶನ. ಈಗಾಗಲೇ ೨೫ ದಶಲಕ್ಷಕ್ಕೂ ಹೆಚ್ಚು ಜನರು ಈ ಪ್ರದರ್ಶನವನ್ನು ವೀಕ್ಷಿಸಿದ್ದಾರೆ. ಪರ್ವತದ ಉತ್ತರ ಭಾಗದಲ್ಲಿ ಲೇಸರ್ ಅಲ್ಲದೆ ಸಂಗೀತ ಸಮಾರಂಭ ಗ್ರಾಫಿಕ್ಸ್ ಮತ್ತು ಚರಿತ್ರಾರ್ಹ ಕಥೆಗಳು ಹಾಗೂ ಸಂಗತಿಗಳನ್ನು ಡಿಜಿಟಲ್ ಪ್ರೊಜೆಕ್ಷನ್ ಟೆಕ್ನಾಲಜಿಯನ್ನು ಉಪಯೋಗಿಸಿದ "ತ್ರೀಡಿ" ಪರಿಣಾಮದ ಪ್ರದರ್ಶನಗಳೂ ಇರುತ್ತವೆ. ಲೇಸರ್ ಪ್ರದರ್ಶನವನ್ನು ಪರ್ವತದ ೧೦,೦೦,೦೦೦ ಚ.ಅಡಿಗಳ I –Max ಪರದೆ ಮೇಲೆ ತೋರಿಸಲಾಗುತ್ತದೆ. (Natural rock Screen). ಸ್ಟೋನ್ ಮೌಂಟೈನ್ ಪಾರ್ಕನಲ್ಲಿ ಸುಮಾರು ೨೫ ವಿಶೇಷ ಸಮಾರಂಭಗಳು ಮತ್ತು ಹಬ್ಬಗಳು ಪ್ರತಿ ವರ್ಷ ನಡೆಯುತ್ತವೆ. ರಾಷ್ಟ್ರದಲ್ಲಿಯೇ ಇಲ್ಲಿ ನಡೆಯುವ ಕಲಾ ಕೌಶಲ್ಯದ ಪ್ರದರ್ಶನವಾದ "ಸ್ಟೋನ್ ಮೌಂಟೈನ್ ಯೆಲ್ಲೊ ಡೈಸಿ" ಪ್ರದರ್ಶನ ಅತ್ಯಂತ ಜನಪ್ರಿಯವಾದುದು. ಸುಮಾರು ಎರಡು ಲಕ್ಷಕ್ಕೂ ಹೆಚ್ಚು ಜನರು ಇದರಲ್ಲಿ ಭಾಗವಹಿಸುತ್ತಾರೆ. ಅಟ್ಲಾಂಟಾ ನಗರಕ್ಕೆ ಸಮೀಪವಿರುವುದರಿಂದ ಹೆಚ್ಚಿನ ಪ್ರವಾಸಿಗಳು ಇಲ್ಲಿಗೆ ಬಂದು ಇಲ್ಲಿಯ ನೈಸರ್ಗಿಕ ಸೌಂದರ್ಯದ ಸಾನ್ನಿಧ್ಯದ ಸವಿಯನ್ನು ಅನುಭವಿಸುವುದರ ಜೊತೆಗೆ ಇಲ್ಲಿ ನಡೆಯುವ ಚಟುವಟಿಕೆಗಳು ಹಾಗೂ ಪ್ರದರ್ಶನಗಳಲ್ಲಿ ಭಾಗವಹಿಸಿ ಸಂತೋಷದಿಂದ ಹಿಂದಿರುಗುತ್ತಾರೆ. ಈ ಸೃಷ್ಟಿಯ ಸೌಂದರ್ಯವನ್ನು ಅಸ್ವಾದಿಸುವ ಅವಕಾಶವನ್ನು ಉಪಯೋಗಿಸಿಕೊಳ್ಳುವ ಜಾಣತನ ಇರುವವನೇ ಅದೃಷ್ಟವಂತನಲ್ಲವೆ !

## ಶ್ರದ್ಧಾಂಜಲಿ



### ಕರ್ನಾಟಕದ ಮಾಜಿ ಮುಖ್ಯಮಂತ್ರಿ ಶ್ರೀ ಎನ್. ಧರಂಸಿಂಗ್

ಕರ್ನಾಟಕದ ಮಾಜಿ ಮುಖ್ಯಮಂತ್ರಿ ಶ್ರೀ ಎನ್. ಧರಂಸಿಂಗ್ ಅವರು ಹೃದಯಾಘಾತದಿಂದ ಜುಲೈ ೨೭ ರಂದು ವಿಧಿವಶರಾದರೆಂದು ತಿಳಿಸಲು 'ಸಿದ್ಧಗಂಗಾ' ವಿಷಾದಿಸುತ್ತದೆ.

ರಾಜಕೀಯ ಕ್ಷೇತ್ರದಲ್ಲಿ ಅಜಾತಶತ್ರುವೆಂಬ ಕೀರ್ತಿಗೆ ಭಾಜನರಾಗಿದ್ದ ಶ್ರೀ ಧರಂಸಿಂಗ್ ಅವರು ವಿಧಾನಸಭಾ ಸದಸ್ಯರಾಗಿ, ಸಂಸದರಾಗಿ, ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿ, ಸಚಿವರಾಗಿ, ಮುಖ್ಯಮಂತ್ರಿಗಳಾಗಿ ಆಯಾ ಸ್ಥಾನಗಳಿಗೆ ಘನತೆ ಗೌರವಗಳನ್ನು ತಂದುಕೊಟ್ಟಿದ್ದರು. ಸಾಹಿತಿ, ಕಲಾವಿದರ ಬಗ್ಗೆ ಪ್ರೀತಿ ಗೌರವವನ್ನು ಹೊಂದಿದ್ದರು. ಶ್ರೀಮಠದ ಹಾಗೂ ಪರಮಪೂಜ್ಯ ಶ್ರೀ ಶ್ರೀಗಳವರ ಬಗ್ಗೆ ಅಪಾರವಾದ ಗೌರವ ಭಕ್ತಿಯನ್ನಿಟ್ಟುಕೊಂಡಿದ್ದರು.

ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ತಮ್ಮ ಸಂತಾಪ ಸಂದೇಶದಲ್ಲಿ 'ಕರ್ನಾಟಕವನ್ನು ಸಮರ್ಥ ನಾಯಕತ್ವದಲ್ಲಿ ಮುನ್ನಡೆಸಿದ ದೂರದೃಷ್ಟಿಯ ನಾಯಕರೊಬ್ಬರನ್ನು ಕಳೆದುಕೊಂಡಂತಾಯಿತು. ಶ್ರೀಯುತರು ಸರ್ವಜನಾಂಗದ ಏಳ್ಗೆಗೆ ಶ್ರಮಿಸುತ್ತಿದ್ದರು. ಶ್ರೀಮಠಕ್ಕೆ ಅನೇಕ ಸಂದರ್ಭದಲ್ಲಿ ಆಗಮಿಸಿ, ಸಮಾರಂಭಗಳಲ್ಲಿ ಭಾಗವಹಿಸಿ, ಭಕ್ತಿ ಅಭಿಮಾನಗಳನ್ನು ವ್ಯಕ್ತಪಡಿಸಿದ್ದರು. ಅಗಲಿದ ಧರಂಸಿಂಗ್ ಆತ್ಮಕ್ಕೆ ಭಗವಂತ ಚಿರಶಾಂತಿ ನೀಡಲೆಂದು ಆಶಿಸುತ್ತೇವೆ' ಎಂದು ಪತ್ರಿಕಾ ಪ್ರಕಟಣೆಯಲ್ಲಿ ತಿಳಿಸಿದ್ದಾರೆ.

# "ಸದೃಢ ಸಂಕಲ್ಪಗಳು – ಹೇಗೆ ಕೆಲಸ ಮಾಡುತ್ತವೆ ಒಂದು ಉದಾಹರಣೆ"

## ಬೆಂಗಳೂರು ಸಿಟಿ, ಗಾಂಧಿನಗರದ ಕಾಳಿದಾಸ ರಸ್ತೆಯಲ್ಲಿರುವ ಮಹಾಭೋದಿ ಸೊಸೈಟಿಯಲ್ಲಿ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ ೧೧೦ನೇ ಜನ್ಮ ದಿನಾಚರಣೆ

– ತುಳಸಿರಾಮಯ್ಯ *

೧೯೫೬ನೇ ಇಸವಿಯಲ್ಲಿ ಬುದ್ಧರಖ್ಖಿತ ಥೇರಾ ರವರು ಒಂದು ಅರಳಿ ವೃಕ್ಷವನ್ನು ತೆಗೆದುಕೊಂಡು ಬಂದು ಬೆಂಗಳೂರಿನಲ್ಲಿ ಮಹಾಬೋಧಿ ಸೊಸೈಟಿಯನ್ನು ಸ್ಥಾಪಿಸಿ, ಭಗವಾನ್ ಬುದ್ಧರ ಧರ್ಮವನ್ನು ಪ್ರಪ್ರಥಮವಾಗಿ ದಕ್ಷಿಣ ಭಾರತದಲ್ಲಿ ಪ್ರಚಾರ ಮಾಡಲು ಆರಂಭಿಸಿದರು. ಹಾಗೆಯೇ ೧೯೫೬ ರಲ್ಲಿ ಉಪಾಸಕ ಆದ ತುಲಸಿರಾಮಯ್ಯ ಸಿದ್ಧಗಂಗಾ ಮಠದಲ್ಲಿ ಹೈಸ್ಕೂಲಿಗೆ ಸೇರಿದಾಗ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರಿಗೆ ಸುಮಾರು ೫೦ ವರ್ಷಗಳಾಗಿತ್ತು. ಆಗ ೪೦೦ ಮಂದಿಗೆ ಉಚಿತ ದಾಸೋಹ ಮತ್ತು ವಿದ್ಯಾಭ್ಯಾಸಕ್ಕೆ ಅವಕಾಶವನ್ನು ಶ್ರೀಗಳು ಕಲ್ಪಿಸಿದ್ದರು. ಈಗ ಡಾ. ಶಿವಕುಮಾರ ಸ್ವಾಮೀರವರಿಗೆ ೧೧೦ ವರ್ಷದ ಜನ್ಮ ದಿನಾಚರಣೆ ನಡೆಯುತ್ತಿದೆ. ಸುಮಾರು ೧೦,೦೦೦ ವಿದ್ಯಾರ್ಥಿಗಳು, ಶ್ರೀಮಠದಲ್ಲಿ ಅಭ್ಯಾಸ ಮಾಡುತ್ತಿದ್ದಾರೆ. ಡಾ. ಶಿವಕುಮಾರ ಸ್ವಾಮಿರವರು ಬುದ್ಧ, ಬಸವಣ್ಣ ಮತ್ತು ಅಂಬೇಡ್ಕರವರ ತತ್ತ್ವಗಳನ್ನು ಆಚರಣೆ ಮಾಡುತ್ತಾ ಯಾವುದೇ ಜಾತಿ, ಮತ, ಲಿಂಗ ತಾರತಮ್ಯಗಳನ್ನು ಮಾಡದೇ ಸಮಾಜಕ್ಕೆ ಹೆಚ್ಚಿನ ಸೇವೆಯನ್ನು ಸಲ್ಲಿಸುತ್ತಿದ್ದಾರೆ.

ಶ್ರೀಮಠದ ಹಳೆ ವಿದ್ಯಾರ್ಥಿಯಾದ ಉಪಾಸಕ ತುಳಸಿ ರಾಮಯ್ಯನವರು ಸುಮಾರು ೧೩ ವರ್ಷಗಳ ಹಿಂದೆ ತಮ್ಮ ಮನೆಯಲ್ಲಿ ಶ್ರೀಗಳ ಶತಮಾನೋತ್ಸವವನ್ನು ಮುಂಚೆಯೇ ಮಾಡಿ ಗುರುಗಳು ಇನ್ನೂ ಹೆಚ್ಚಿನ ಸೇವೆಯನ್ನು ಸಮಾಜಕ್ಕೆ ನೀಡಲಿ ಎಂಬ ಸಂಕಲ್ಪವನ್ನು ಮಾಡಿದ್ದರು. ಈ ಸಂಕಲ್ಪ ಈಡೇರಿದ ಪ್ರಯುಕ್ತ ದಿನಾಂಕ ೯-೪-೨೦೧೭ ರಂದು ಡಾ. ಶಿವಕುಮಾರ ಸ್ವಾಮಿರವರಿಗೆ ಇನ್ನೂ ಹೆಚ್ಚಿನ ಆಯುಸ್ಸು, ಆರೋಗ್ಯ



ನೀಡಿ ಸಾರ್ಥಕ ಜೀವನ ನಡೆಸವ ಸಲುವಾಗಿ ಮತ್ತು ಅವರ ಸವಿನೆನಪಿಗಾಗಿ ಮಹಾಭೋದಿ ಸೊಸೈಟಿಯಲ್ಲಿನ ಬುದ್ಧ ವಿಹಾರದಲ್ಲಿ ೧೩೦ ಮಂದಿ ಬೌದ್ಧ ಬಿಕ್ಕುಗಳಿಗೆ (ಸನ್ಯಾಸಿಗಳಿಗೆ) ಸಂಘದಾನ ಮಾಡಿ ಉಚಿತ ಭೋಜನ ವ್ಯವಸ್ಥೆ ಮಾಡಿದ್ದರು. ಅದರಂತೆ ಎಲ್ಲಾ ಬೌದ್ಧ ಬಿಕ್ಕುಗಳು ಶ್ರೀಗಳವರ ಜನ್ಮದಿನಾಚರಣೆಯನ್ನು ಆಚರಿಸಿ ಡಾ. ಶಿವಕುಮಾರ ಸ್ವಾಮಿಯವರಿಗೆ ಹೆಚ್ಚಿನ ಆಯಸ್ಸು, ಆರೋಗ್ಯ ನೀಡುವಂತೆ ಪ್ರಾರ್ಥಿಸಿದರು ಮತ್ತು ಅಂತಿಮವಾಗಿ ಪ್ರಪಂಚದಲ್ಲಿ ಶಾಂತಿ, ಶುಭ ಉಂಟಾಗಲೆಂದು ಪ್ರಾರ್ಥಿಸಲಾಯಿತು.

ಬ್ರಹ್ಮ ವಿದ್ಯಾ ಸಮಾಜದ ಸದಸ್ಯನಾಗಿ ಭಗವಾನ್ ಬುದ್ಧರ ವಿಪಸ್ಸನ ಧ್ಯಾನವನ್ನು ಕಳೆದ ೩೦ ವರ್ಷಗಳಿಂದ ರಾತ್ರಿ ೩.೦೦ ರಿಂದ ೬.೦೦ ಗಂಟೆವರೆಗೆ ಪ್ರತಿದಿನ ಧ್ಯಾನ ಮಾಡುವ ಅಭ್ಯಾಸ, ಒಂದು ಸಾರಿ ನಮ್ಮ ಡಾ. ಶಿವಕುಮಾರ ಸ್ವಾಮಿ ಅಸ್ವಸ್ಥರಾದಾಗ ಅವರ ಶರೀರದಲ್ಲಿರುವ ರೋಗಾಣುಗಳು ಹೊರ ಹೋಗಿ

* ಸರ್ಕಾರದ ಹೆಚ್ಚುವರಿ ಕಾರ್ಯದರ್ಶಿ (ನಿವೃತ್ತ), # ೭೩, ೭ನೇ ಕ್ರಾಸ್, ೪ನೇ ಮೈನ್, ಮಹಾಲಕ್ಷ್ಮೀ ಲೇಔಟ್ ಮುಂದುವರಿದ ಬಡಾವಣೆ, ಬೆಂಗಳೂರು-೮೬





ಆರೋಗ್ಯವಾಗುವಂತೆ ಧ್ಯಾನ ಮಾಡುತ್ತೇನೆ. ಆದರೆ ನಾನು ವೈದ್ಯನಲ್ಲ. ಅದನ್ನು ಬಿಟ್ಟು ನಾನು ಏನೂ ಮಾಡಲು ಸಾಧ್ಯವಿಲ್ಲವೆಂದು ಗುರುಗಳಿಗೆ ತಿಳಿಸಿದೆನು. ಅದಕ್ಕೆ ಅವರು ನಕ್ಕು ಬಿಟ್ಟರು. ನಾನು ಹಣ್ಣುಗಳನ್ನು ಕೊಟ್ಟು ಬಂದಿದ್ದರಲ್ಲಿ ಒಂದನ್ನು ಓಡೋಡಿ ಹಿಂದಿರುಗಿಸುವಂತೆ ಏರ್ಪಾಟು ಮಾಡಿದರು.

ಆಯುಃ, ಕರ್ಮಂಚ, ವಿತ್ತಂಚ, ವಿದ್ಯಾ, ನಿಧನಮೇವಚ ಎಂಬ ಸೂಕ್ತಿಯಂತೆ ವ್ಯಕ್ತಿಗೆ ಈ ಐದು ಪೂರ್ವನಿರ್ಧಾರವಾಗಿರುತ್ತವೆ ಎಂಬುದು ನಿಜವಾದರೂ ಯಾರು ಯಾವಾಗ ನಿಧನ ಹೊಂದುತ್ತೇವೆಂಬುದು ಸಾಮಾನ್ಯವಾಗಿ ತಿಳಿಯುವುದಿಲ್ಲ. ಆದರೆ ಕರ್ಮನಿಯಮ ಮತ್ತು ಸತ್‌ಸಂಕಲ್ಪಗಳು ಹೇಗೆ ಸರಿಹೊಂದುತ್ತವೆ ಎಂಬುದನ್ನು ತಿಳಿಯಬಹುದು. ನಮ್ಮ ಭಾವನೆ "ಎದ್ ಭಾವಂತದ್ಭವತಿ" ಅಂದರೆ ಮನಸ್ಸಿನಂತೆ ಮಹಾದೇವ ಎಂಬಂತೆ ಮತ್ತು ಭಗವಾನ್ ಬುದ್ಧರ ಧಮ್ಮಪದ ಗ್ರಂಥದ ೨ನೇ ಗಾಥಾದಲ್ಲಿ ತಿಳಿಸಿರುವಂತೆ ಪರಿಶುದ್ಧವಾದ ಮನಸ್ಸಿನಿಂದ ಒಬ್ಬ ವ್ಯಕ್ತಿ ಮಾತನಾಡಿ ಅದರಂತೆ ನಡೆದುಕೊಂಡಲ್ಲಿ ಸುಖ/ಸಂತೋಷ ಅವನನ್ನು ಅವನ ನೆರಳು ಹಿಂಬಾಲಿಸಿದಂತೆ ಸುಖ ಸಂತೋಷದ ಸಂಕಲ್ಪಗಳೂ ಸಹ ಹಿಂಬಾಲಿಸುತ್ತವೆ ಎಂದು ತಿಳಿದು ಬರುತ್ತದೆ.

ವೇದಾಂತ ವಿಜ್ಞಾನಿಗಳು ಹೇಳುವಂತೆ, Life is nothing but series of experiences of waves/vibrations of different frequencies on which communications can be transmitted from place to place to different people around the world on which principles, the present mobile communications/messages transmits around the world. This is being practically experienced by all in our daily life.

ಮೇಲ್ಕಂಡ ಆಧಾರದ ಮೇಲೆ ನಮ್ಮ ಕುಶಲ ಮನಸ್ಸಿನಿಂದ ಪರಿಶುದ್ಧವಾದ, ಬಲವಾದ ದೃಢವಾದ ಸತ್ ಸಂಕಲ್ಪಗಳು/ತರಂಗಗಳು ಔಷಧಿಯ ಜೊತೆಗೆ ಗುರುಗಳ ಶರೀರವನ್ನು ತಲುಪಿ ಹೇಗೆ ವೈಜ್ಞಾನಿಕವಾಗಿ ಕೆಲಸ ಮಾಡುತ್ತದೆ ಎಂಬುದನ್ನು ನಿರ್ಧಾರ ಮಾಡಿಕೊಳ್ಳಬಹುದು.

# ಜ್ಯೋತಿ

ಸಿದ್ಧಗಂಗೆಯ ಜ್ಯೋತಿ
ಕರುನಾಡ ಕೀರ್ತಿ
ಶ್ರೀ ಶಿವಕುಮಾರ ಗುರು
ಶರಣು ಶರಣಾರ್ಥಿ

ಕೋಳಿ ಕೂಗದ ಮುನ್ನ
ಓಂಕಾರದಾ ಗಾನ
ಜಪತಪದ ಧ್ಯಾನ
ಮೌನವನು ಸಂಧಾನ ॥

ಸಿದ್ಧಗಂಗೆಯ ನೆಲದ
ಕಣಕಣವೂ ಸಾರುತಿದೆ
ಕಾಯಕವೆ ಕೈಲಾಸ
ಮಂತ್ರ ಮೊಳಗುತಿದೆ ॥

ಮುಂಜಾವು ಸಂಜೆಯಲಿ
ಚಿಕ್ಕೊರಲ ದನಿಯಲ್ಲಿ
ಬಾಲಕರ ಶಿವಗೀತೆ
ಶ್ರೀಗುರು ಸನ್ನಿಧಿಯಲ್ಲಿ ॥

ಜಾತಿ ಮತ ಭೇದವಿರದೆ
ಎಲ್ಲರೂ ನನ್ನವರೆಂದಿದೆ
ಸಾಸಿರ-ಸಾಸಿರ ಮೀರಿದ
ಹಸಿದೊಡಲ ತಣಿಸಿದೆ ॥

ಸರಸತಿಯ ದೇಗುಲಕೆ
ಹೊನ್ನ ಕಳಶವಿರಿಸಿದೆ
ತ್ರಿವಿಧ ದಾಸೋಹದ
ಮನ್ನಣೆಯ ಪಡೆದಿದೆ ॥

ಬಯಸದಿದ್ದರೂ
ಪದವಿಗಳ ಸರಮಾಲೆ
ಬೇಕು-ಬೇಡವೆಂಬೆರಡಳಿದ
ನಿರ್ಲಿಪ್ತ ಭಾವದ ಶಿವಲೀಲೆ ॥

ಆರದಿಲೆಂದೆಂದೂ
ಜ್ಞಾನಗಂಗೆಯ ಜ್ಯೋತಿ
ಅಟವೀಶ-ಉದ್ದಾನೇಶ್ ಗುರು
ಒಲಿದು ಹರಸಿದ ಜ್ಯೋತಿ ॥

ಶ್ರೀ ಶಿವಕುಮಾರೇಶ ಗುರು
ಶರಣ ಶರಣಾರ್ಥಿ !

– ವೀರೇಶ್ (ಸಿ.ಎಂ. ವೀರಣ್ಣ)
ವಿಜಯಪುರ

# ಕರ್ಮಯೋಗಿ, ಲೋಕಸೇವಾ ನಿರತ ಜಿ.ಎಂ. ಸಿದ್ಧರಾಮಣ್ಣ

- ಎಚ್.ಎಸ್. ಸಿದ್ಧಗಂಗಪ್ಪ *

ಓದಿನಲ್ಲಿ ಆಸಕ್ತಿ ಇಲ್ಲದೆ ಶಾಲೆಗೆ ಹೋಗಿ ಕಲಿಯದಿದ್ದರೂ ಸಾವಿರಾರು ಗ್ರಾಮೀಣ ಪ್ರದೇಶದಿಂದ ಬಂದ ಬಡ ವೀರಶೈವ ವಿದ್ಯಾರ್ಥಿಗಳಿಗೆ ಉಚಿತ ವಿದ್ಯಾರ್ಥಿನಿಲಯ ಸ್ಥಾಪಿಸಿ, ಆಶ್ರಯ ನೀಡಿ ಅವರ ಬದುಕು ಉಜ್ವಲವಾಗಿ ಬೆಳಗುವಂತೆ ಮಾಡಿದವರು ಶ್ರೀ ಜಿ.ಎಂ. ಸಿದ್ಧರಾಮಣ್ಣನವರು. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಕೃಪಾಶೀರ್ವಾದಿಂದ ನಾನು ಈ ವಿದ್ಯಾರ್ಥಿ ನಿಲಯದ ಫಲಾನುಭವಿ ಎಂದು ಹೇಳುವಾಗ ಧನ್ಯತಾಭಾವನೆ ಮೂಡುತ್ತದೆ. ಇಂದು ಈ ವಿದ್ಯಾರ್ಥಿ ನಿಲಯದಲ್ಲಿ ಆಶ್ರಯ ಪಡೆದು ಶಿಕ್ಷಣ ಮುಗಿಸಿದ ಸಾವಿರಾರು ವಿದ್ಯಾರ್ಥಿಗಳು ತಮ್ಮ ಭವಿಷ್ಯವನ್ನು ರೂಪಿಸಿಕೊಂಡು ವಿವಿಧ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಅವರೆಲ್ಲರೂ ಶ್ರೀ ಜಿ.ಎಂ. ಸಿದ್ಧರಾಮಣ್ಣನವರನ್ನು ಪ್ರತಿದಿನವೂ ಸ್ಮರಿಸುತ್ತಾ ಕೃತಜ್ಞತೆಗಳನ್ನು ಸಲ್ಲಿಸುತ್ತಿದ್ದಾರೆ. ತಾವು ಕಷ್ಟಪಟ್ಟು ಪ್ರಾಮಾಣಿಕತೆಯಿಂದ ಗಳಿಸಿದ ಹಣವನ್ನು ಸ್ವಾರ್ಥಕ್ಕೆ ಬಳಸಿಕೊಳ್ಳದೆ ಲೋಕಕಲ್ಯಾಣಕ್ಕಾಗಿ ವಿನಿಯೋಗಿಸಿದ ಶ್ರೀ ಸಿದ್ಧರಾಮಣ್ಣ ನವರು ಪ್ರಾತಃಸ್ಮರಣೀಯರು.

**ಜನನ :**

ಹುಟ್ಟಿದೂರು ತುಮಕೂರು ತಾಲ್ಲೂಕು ಗೂಳೂರು. ಗೂಳೂರು ಗಣೇಶೋತ್ಸವಕ್ಕೆ ಪ್ರಸಿದ್ಧಿ. ತಂದೆ ಶರಣ ಮಲ್ಲಪ್ಪ, ತಾಯಿ ಶರಣೆ ಶ್ರೀಮತಿ ಗಂಗಮ್ಮ ದಂಪತಿಗಳಿಗೆ ಪುತ್ರರಾಗಿ ಜನಿಸಿದವರು ಸಿದ್ಧರಾಮಣ್ಣ. ಹುಟ್ಟಿದ ವರ್ಷ ಸುಮಾರು ೧೯೦೫. ಮಗು ಹುಟ್ಟಿದ್ದು ಮೂಲಾ ನಕ್ಷತ್ರದಲ್ಲಿ, ಮೂಲಾ ನಕ್ಷತ್ರದಲ್ಲಿ ಗಂಡು ಹುಟ್ಟಿದರೆ ಹೆತ್ತವರಿಗೆ ಕೆಡುಕು ಎಂಬ ನಂಬಿಕೆ ಕಾಕತಾಳೀಯವೆಂಬಂತೆ ಹುಸಿಯಾಗಲಿಲ್ಲ. ತಂದೆ ಮಲ್ಲಪ್ಪನವರು ಅಕಾಲಿಕ ಮರಣಕ್ಕೆ ತುತ್ತಾದರು. ಮಗುವಿನ ಆರೋಗ್ಯವು ಸರಿಯಿಲ್ಲದೆ ಸಾವು ಬದುಕಿನ ನಡುವೆ ಹೋರಾಟ ನಡೆಸಿತು. ಆರೋಗ್ಯ ತುಂಬಾ ಕ್ಷೀಣಿಸಿ ಮಗು ತೀರಿಹೋಯಿತೆಂದು ಭಾವಿಸಿ ಸ್ಮಶಾನಕ್ಕೆ ತೆಗೆದು ಕೊಂಡು ಹೋದರು, ಪವಾಡವೆಂಬಂತೆ ನಿಶ್ಚೇಜವಾಗಿದ್ದ ಕೈಕಾಲುಗಳಿಗೆ ಚೈತನ್ಯ ಬಂದು ಅಲುಗಾಡಿತು, ಉಸಿರಾಡಿತು. ವಿಧಿ ಲಿಪಿಯನ್ನು ಬಲ್ಲವರಾರು; ಮಗು ಸತ್ತು ಬದುಕಿತು, ಅಲ್ಲಿಂದ ತಾಯಿ ಮಗುವನ್ನು 'ಸ್ಮಶಾನ ಸಿದ್ಧ'ನೆಂದು ಕರೆಯುತ್ತಿದ್ದರು.

**ಶಿಕ್ಷಣ :**

ಪ್ರಾಥಮಿಕ ಶಾಲಾ ಶಿಕ್ಷಣ ಹುಟ್ಟಿದೂರಿನಲ್ಲಿ ಪ್ರಾರಂಭವಾಯಿತು. ತನ್ನ ಮಗ ಚೆನ್ನಾಗಿ ಓದಿ ವಿದ್ಯಾವಂತನಾಗಿ ಸಮಾಜದಲ್ಲಿ ಗಣ್ಯ ವ್ಯಕ್ತಿಯಾಗಬೇಕೆಂದು ತಾಯಿಯ ಆಸೆ ಕನಸಾಗಿಯೇ ಉಳಿಯಿತು. ತುಂಬಾ ಒರಟು ಸ್ವಭಾವದವನಾಗಿದ್ದ ಸಿದ್ಧರಾಮಣ್ಣ ತನ್ನ ತುಂಟಾಟದಿಂದ ಅಕ್ಕಪಕ್ಕದವರ ಕೆಂಗಣ್ಣಿಗೆ ಗುರಿಯಾಗಿದ್ದ. ತಾಯಿಯ ಬುದ್ಧಿವಾದ ಹೊಳೆಯಲ್ಲಿ ಹುಣಸೆಹಣ್ಣು ಹಿಂಡಿದಂತಾಯಿತು. ಓದು ನೈವೇದ್ಯವಾಯಿತು. ತನ್ನ ಮಗನ ವರ್ತನೆಯಿಂದ ಆ ತಾಯಿಯು ಕೊರಗುವುದನ್ನು ಬಿಟ್ಟರೆ ಏನನ್ನು ಮಾಡದ ಅಸಹಾಯಕ ಸ್ಥಿತಿ, ತನ್ನ ಮಗನಿಗೆ ಸದ್ಬುದ್ಧಿಯನ್ನು ಕೊಡು ಎಂದು ದೇವರನ್ನು ಸದಾ ಪ್ರಾರ್ಥಿಸುತ್ತಿದ್ದಳು.

ಮಗ ಸರಿದಾರಿಯಲ್ಲಿ ಬರುವುದಿಲ್ಲ ಎಂದು ನಿಶ್ಚಯಿಸಿದ ತಾಯಿ ಗಂಗಮ್ಮ, ಸಿದ್ಧರಾಮಣ್ಣನನ್ನು ತಮ್ಮ ಸಂಬಂಧಿಗಳೇ ಆಗಿದ್ದ ಸಿದ್ಧಲಿಂಗಸ್ವಾಮಿಯವರ ಮಂಡಿಯಲ್ಲಿ ಕೆಲಸಕ್ಕೆ ಸೇರಿಸಿದರು. ಕೆಲವೇ ವರ್ಷಗಳಲ್ಲಿ ವ್ಯಾಪಾರದ ಎಲ್ಲ ರೀತಿ-ನೀತಿಗಳನ್ನು ಮೈಗೂಡಿಸಿಕೊಂಡು, ವ್ಯವಹಾರಕ್ಕೆ ಅಗತ್ಯವಾದ ತೆಲುಗು, ತಮಿಳು, ಹಿಂದಿ ಭಾಷೆಗಳನ್ನು ಕರಗತ ಮಾಡಿಕೊಂಡರು. ಮಾಡುವ ಕೆಲಸದಲ್ಲಿ ಶ್ರದ್ಧೆ, ನಿಷ್ಠೆಯಿಂದ ಆಶ್ರಯ ನೀಡಿದ ಸಿದ್ಧಲಿಂಗ ಸ್ವಾಮಿಗಳವರ ಪ್ರೀತಿ, ವಿಶ್ವಾಸಕ್ಕೆ ಪಾತ್ರರಾದರು.

**ವಿವಾಹ :**

ಒಂದು ಕಡೆ ಸಿದ್ಧರಾಮಣ್ಣನವರು ವ್ಯಾಪಾರದ ಗರಡಿಯಲ್ಲಿ ಸಿದ್ಧಹಸ್ತನಾದರೆ, ಮತ್ತೊಂದು ಕಡೆ ಒರಟುತನದ ಜೊತೆಗೆ ಕುಡಿತ, ಸಿಗರೇಟು, ಮೊದಲಾದ ದುಶ್ಚಟಗಳು ಅಂಟಿಕೊಂಡವು. ಈ ಎಲ್ಲ ಸಮಸ್ಯೆಗಳಿಗೆ ಪರಿಹಾರವೆಂದರೆ ಮದುವೆ ಮಾಡಿದರೆ ಕೈಹಿಡಿದವಳು ಸರಿದಾರಿಗೆ ತರಬಹುದೆಂಬ ದೂರದೃಷ್ಟಿಯಿಂದ, ತುಮಕೂರಿನ ಶ್ರೀ ಬಸವಣ್ಣ ಮತ್ತು ಶ್ರೀಮತಿ ಪುಟ್ಟಮ್ಮನವರ ಮಗಳು ಸೋಮಕ್ಕನೊಂದಿಗೆ ವಿವಾಹ ಮಾಡಿದರು. ಮದುವೆ ಅವರ ಮೇಲೆ ಯಾವ ಪ್ರಭಾವವನ್ನು ಬೀರಲಿಲ್ಲ. ತಾಯಿ ಮತ್ತು ಬಂಧುಗಳು ಇಟ್ಟ ಭರವಸೆ ಹುಸಿಯಾಯಿತು. ಶ್ರೀಮತಿ ಸೋಮಕ್ಕನವರು ಗಂಡನ ಉದ್ಧಟತನವನ್ನು ಸಹಿಸಿಕೊಂಡು ಸಂಸಾರದ ಬಂಡಿಯನ್ನು ಸಾಗಿಸತೊಡಗಿದರು.

**ಸ್ವಯಂ ಉದ್ಯೋಗ :**

ವ್ಯಾಪಾರದಲ್ಲಿ ಏರಿಳಿತಗಳನ್ನು ಚೆನ್ನಾಗಿ ಅರ್ಥ ಮಾಡಿಕೊಂಡಿದ್ದ ಸಿದ್ಧರಾಮಣ್ಣನವರು ತಾನೇ ಏಕೆ ಸ್ವಂತ ವ್ಯಾಪಾರ ಪ್ರಾರಂಭ ಮಾಡಬಾರದು ಎಂದು, ತನ್ನ ಮನದಿಂಗಿತವನ್ನು ಸಿದ್ಧಲಿಂಗಸ್ವಾಮಿಗೆ ತಿಳಿಸಿದರು. ಅವರು ಸಂತೋಷದಿಂದ ಒಪ್ಪಿಗೆಯನ್ನು ನೀಡಿ ಒಳಿತಾಗಲೆಂದು ತುಂಬು ಹೃದಯದಿಂದ ಹಾರೈಸಿದರು.

ಅಂಗಡಿಯೊಂದನ್ನು ಬಾಡಿಗೆಗೆ ಪಡೆದು ಮಂಡಿ ವ್ಯಾಪಾರ ಆರಂಭಿಸಿದರು. ವ್ಯಾಪಾರದ ಏಳುಬೀಳುಗಳನ್ನು ಅರ್ಥಮಾಡಿಕೊಂಡಿದ್ದ ಅವರಿಗೆ ವ್ಯವಹಾರ ಕಷ್ಟವಾಗಲಿಲ್ಲ. ಬಿದಿಗೆ ಚಂದ್ರನಂತೆ ವೃದ್ಧಿಯಾಗುತ್ತಾ ಪ್ರಗತಿಯ ದಿಟ್ಟ ಹೆಜ್ಜೆಗಳನ್ನಿಡುತ್ತಾ ಸಾಗಿದರು. 'ಶ್ರೀ ಜಿ.ಎಂ. ಸಿದ್ಧರಾಮಣ್ಣ ಮಂಡಿ ಮರ್ಚಂಟ್ ಆ್ಯಂಡ್ ಕಮೀಷನ್ ಏಜೆಂಟ್, ಮಂಡಿಪೇಟೆ, ತುಮಕೂರು ಈ ವಿಳಾಸದಲ್ಲಿ ಸಂಸ್ಥೆಯನ್ನು ಹುಟ್ಟುಹಾಕಿದರು. ಈ ಸಂಸ್ಥೆ ದಿನಗಳೆದಂತೆ ಪ್ರಸಿದ್ಧಿಯಾಯಿತು. ಮಾಡುವ ಕೆಲಸದಲ್ಲಿ ಶ್ರದ್ಧೆ, ನಿಷ್ಠೆ, ಕಾಳಜಿ, ಬದ್ಧತೆಯಿದ್ದರೆ ಏನೆಲ್ಲಾ ಸಾಧಿಸಬಹುದೆಂಬುದಕ್ಕೆ ಸಿದ್ಧರಾಮಣ್ಣನವರ ವ್ಯವಹಾರ ಕುಶಲತೆ ಇತರರಿಗೆ ಸ್ಫೂರ್ತಿ !

**ಕಲ್ಲರಳಿತು :**

ಶ್ರೀಶೈಲಕ್ಕೆ ಹೋಗಿ ಮಲ್ಲಿಕಾರ್ಜುನನ ದರ್ಶನ ಮಾಡಿ ಬೇಡಿಕೊಂಡರೆ ಮಗನ ವರ್ತನೆಯಲ್ಲಿ ಬದಲಾವಣೆಯಾಗಬಹುದೆಂಬ ಆಶಯದಿಂದ ಶ್ರೀಶೈಲಕ್ಕೆ ಹೋಗಲು ತಾಯಿ ತೀರ್ಮಾನಿಸಿ, ಮಗನ ಹತ್ತಿರ ಬಯಕೆಯನ್ನು ಪ್ರಸ್ತಾಪಿಸಿದರು. ಮಗ ಈಗ ಬೇಡ, ಮುಂದೆ ಹೋಗಿಬಂದರಾಯಿತು ಎಂದ. ತಾಯಿ ಹೋಗಲೇಬೇಕು ಎಂದು ಹಠಮಾಡಿದಾಗ ಸಿದ್ಧರಾಮಣ್ಣನವರಿಗೆ ಕೋಪ ಬಂದು, ತಮ್ಮ ಅಂಗಡಿಯಲ್ಲಿ ಕೆಲಸ ಮಾಡುತ್ತಿದ್ದ ಗುರಣ್ಣನನ್ನು ಕರೆದು ಹಣದ ಗಂಟನ್ನು ಕೈಗಿಟ್ಟು 'ಇವಳನ್ನು ತೊಲಗಿಸಿ ಬಾ, ಹೋಗು' ಎಂದರು. ತಾಯಿ ಗಂಗಮ್ಮ ಶ್ರೀಶೈಲಕ್ಕೆ ಹೋಗಿ ಮಲ್ಲಿಕಾರ್ಜುನನಿಗೆ ಪೂಜೆ ಮಾಡಿಸಿ ಮಗನಿಗೆ ಸದ್ಬುದ್ಧಿಯನ್ನು ಕರುಣಿಸೆಂದು ಬೇಡಿಕೊಂಡು, ಧನ್ಯತಾಭಾವದಿಂದ ಹಿಂತಿರುಗಲು ಸಜ್ಜಾದರು. ಆದರೆ ವಿಧಿ ತುಮಕೂರಿಗೆ ಹಿಂತಿರುಗಿ ಮಗನನ್ನು ನೋಡುವ ಭಾಗ್ಯವನ್ನು ಕರುಣಿಸಲಿಲ್ಲ. ಮಾರಕವಾದ ಕಾಲರ ವ್ಯಾಧಿ ಕಾಣಿಸಿಕೊಂಡು ಯಾತ್ರೆಗೆ ಹೋಗಿದ್ದ ಅನೇಕ ಜನರು ಬಲಿಯಾದರು. ಅವರಲ್ಲಿ ಗಂಗಮ್ಮನೂ ಒಬ್ಬರು.

ತಾಯಿಯ ಮರಣದ ವಾರ್ತೆಯನ್ನು ತಿಳಿದ ಸಿದ್ಧರಾಮಣ್ಣನವರಿಗೆ ದಿಗ್ಭ್ರಮೆಯಾಗಿ ಅಪೂರ್ವವಾದ ವಸ್ತುವನ್ನು ಕಳೆದುಕೊಂಡ ಅನುಭವವಾಯಿತು. ತಮಗರಿವಿಲ್ಲದೆ ಕಣ್ಣೀರಧಾರೆ ಸುರಿಯಿತು. ಅವರು ಶ್ರೀಶೈಲಕ್ಕೆ ಹೋಗಬೇಕೆಂದಾಗ 'ತೊಲಗಿಸಿ ಬಂದು ಬಿಡು' ಎಂದು ಹೇಳಿದ ಮಾತು ಮನಸ್ಸಿನಲ್ಲಿ ಬೇರೂರಿ ಪಶ್ಚಾತ್ತಾಪದ ಒಡಲಲ್ಲಿ ಬೆಂದು ಹೋದರು. ನಡೆ-ನುಡಿಗಳಲ್ಲಿ ಬದಲಾವಣೆ ಕಾಣಿಸತೊಡಗಿತು.

**ಸ್ಪರ್ಶಮಣಿಯಿಂದ ಕಬ್ಬಿಣ ಬಂಗಾರವಾಯಿತು :**

ಸಿದ್ಧರಾಮಣ್ಣವರ ಮನಸ್ಸಿನಲ್ಲಿ ಅಶಾಂತಿಯ ಬಿರುಗಾಳಿ ಬೀಸುತ್ತಿರುವುದನ್ನು ಕಂಡ ಅವರ ಹಿತೈಷಿಗಳು ತ್ರಿವಿಧ ದಾಸೋಹಿ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದರ್ಶನಕ್ಕಾಗಿ ಕರೆದುಕೊಂಡು ಹೋದರು. ಮೊದಲ ದರ್ಶನದಲ್ಲಿಯೇ ಅವರ ಮನಸ್ಸು ಮಾನಸ ಸರೋವರದ ತಿಳಿನೀರಾಯಿತು. ಪೂಜ್ಯ ಶ್ರೀಗಳವರ ಶಿವಪಾದ ಸ್ಪರ್ಶದಿಂದ ಅವರಲ್ಲಿ ಚೈತನ್ಯ ಮೂಡುವಂತಾಯಿತು. ಅಂತರಂಗದಲ್ಲಿ ಬೀಸುತ್ತಿದ್ದ ಬಿರುಗಾಳಿ ಶಾಂತವಾಗಿ ತಂಗಾಳಿ ಬೀಸುವಂತಾಯಿತು. ಅವರ ಮನಸ್ಸಿನಲ್ಲಿ ಆಧ್ಯಾತ್ಮಿಕದ ಕಡೆ ಒಲವು ಮೂಡಲಾರಂಭಿಸಿತು.

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ಲನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧

**ಪರಿವರ್ತನೆ :**

ಪರಮಪೂಜ್ಯ ಶ್ರೀ ಶ್ರೀಗಳವರನ್ನು ದರ್ಶನ ಮಾಡಿದ ಮೇಲೆ ಅವರಲ್ಲಿ ಅದ್ಭುತವಾದ ಪರಿವರ್ತನೆ ಕಾಣಲಾರಂಭಿಸಿತು. ಅಂದಿನಿಂದ ಗುರು-ಹಿರಿಯರು, ಸಾಧು-ಸಂತರನ್ನು ಭಕ್ತಿ, ಗೌರವದಿಂದ ಕಾಣುವ, ಸಹಾಯ ಹಸ್ತ ನೀಡುವ ಹೃದಯ ವೈಶಾಲ್ಯತೆ ಕಂಡುಬಂದಿತು. ಸಮಾಜದ ಬಗ್ಗೆ ಚಿಂತನೆ ಮೂಡಿತು. ದಾನ, ಧರ್ಮ, ಪರೋಪಕಾರ ಮಾಡಬೇಕೆನ್ನುವ ಬಯಕೆ ಚಿಗುರಿತು. ಅವರ ವರ್ತನೆಯಲ್ಲಿ ಬದಲಾವಣೆ ಕಂಡು ಬಹುಜನರು ಆಶ್ಚರ್ಯ ವ್ಯಕ್ತಪಡಿಸಿದರೆ, ಮತ್ತೆ ಕೆಲವರು ನಂಬಲಿಲ್ಲ. ಮತ್ತೆ ಕೆಲವರು ಇದೊಂದು ಅದ್ಭುತ ಎಂದು ಉದ್ಗರಿಸಿದರು. ಮಗನಲ್ಲಿ ಆದ ಈ ಹೃದಯ ಪರಿವರ್ತನೆಯುನ್ನು ಕಂಡಿದ್ದರೆ ತಾಯಿ ಗಂಗಮ್ಮನವರು ಅದೆಷ್ಟು ಸಂತೋಷಪಡುತ್ತಿದ್ದರೊ!

ಸಿದ್ಧರಾಮಣ್ಣನವರು ತಾವು ಗಳಿಸಿದ ಹಣವನ್ನು ಲೋಕೋಪಕಾರಕ್ಕಾಗಿ ಬಳಸಿಕೊಳ್ಳಬೇಕೆಂದು ನಿಶ್ಚಯ ಮಾಡಿದರು. ಅದುವರೆಗೆ ಸಿದ್ಧರಾಮಣ್ಣನವರ ಮಂಡಿ ಕೇವಲ ವ್ಯಾಪಾರ ಕೇಂದ್ರವಾಗಿತ್ತು. ಅದು ಕ್ರಮೇಣ ಅತಿಥಿ, ಸಾಧು-ಸಂತರನ್ನು ಕರೆದು ಗೌರವಿಸಿ, ಆದರಿಸುವ ತಾಣವಾಯಿತು. ದಾಸೋಹದ ಮನೆಯಾಯಿತು. ಮೊದಲು ಸಿರಿವಂತರಿಗೆ ಮಣೆ ಹಾಕುತ್ತಿದ್ದವರು ಬಡವರಿರಲಿ, ಸಿರಿವಂತರಿರಲಿ, ಅಧಿಕಾರಿಗಳಿರಲಿ, ರೈತರಿರಲಿ, ಎಲ್ಲರನ್ನು ಹೃದಯಪೂರ್ವಕವಾಗಿ ಸ್ವಾಗತಿಸಿ ಅತಿಥಿ ಸತ್ಕಾರದ ವ್ಯವಸ್ಥೆ ನಿರಂತರವಾಗಿ ನಡೆಯುವಂತೆ ನೋಡಿಕೊಳ್ಳುತ್ತಿದ್ದರು.

ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರನ್ನು ದರ್ಶನ ಮಾಡಿದ ಮೇಲೆ ಮನಸ್ಸಿಗೆ ಬಂದಾಗಲೆಲ್ಲ ಶ್ರೀಮಠಕ್ಕೆ ಹೋಗಿ ಪೂಜ್ಯರ ಮೇಲೆ ಪುಷ್ಪವೃಷ್ಟಿಯನ್ನು ಸುರಿಸಿ ಸಂತೋಷಪಡುತ್ತಿದ್ದರು. ಆ ಸಂದರ್ಭದಲ್ಲಿ ಅವರ ಧರ್ಮಪತ್ನಿ ಶ್ರೀಮತಿ ಸೋಮಕ್ಕನವರು ಜೊತೆಯಲ್ಲಿರುತ್ತಿದ್ದರು. ಕಾವಿ ಬಟ್ಟೆ ಕಂಡರೆ ಆಗದವರು ಕಾವಿ ಹಾಕಿದವರನ್ನು ಕಂಡರೆ ಭಕ್ತಿ ಗೌರವದಿಂದ ಕಾಣತೊಡಗಿದರು. ಆಯಾ ಕಾಲದಲ್ಲಿ ದೊರೆಯುವ ಹಣ್ಣುಗಳನ್ನು ಪಾರ್ಸಲ್ ಮೂಲಕ ಉತ್ತರ ಕರ್ನಾಟಕವೂ ಸೇರಿದಂತೆ ಎಲ್ಲ ಮಠ ಮಾನ್ಯಗಳಿಗೂ ಕಳುಹಿಸುತ್ತಿದ್ದರು. ಶಿವರಾತ್ರಿ, ಯುಗಾದಿ, ಗಣೇಶನ ಹಬ್ಬ ಮೊದಲಾದ ಹಬ್ಬಗಳಲ್ಲಿ ಒಳ್ಳೆಯ ಗುಣಮಟ್ಟದ ಧೂಪ, ಗಂಧದಪುಡಿ, ಕರ್ಪೂರ ಮೊದಲಾದ ಪೂಜಾ ಸಾಮಾಗ್ರಿಗಳನ್ನು ಅಂಚೆ ಮೂಲಕ ಕಳುಹಿಸಿ ಸಂತೋಷಪಡುತ್ತಿದ್ದರು. ಕೂಡಲ ಸಂಗಮದಲ್ಲಿ ನಡೆದ ಬಸವಣ್ಣನವರ ಅಷ್ಟಶತಮಾನೋತ್ಸವಕ್ಕೆ ಲಾರಿಗಟ್ಟಲೆ ಕನಕಾಂಬರ, ಮಲ್ಲಿಗೆ, ಸೇವಂತಿಗೆ, ಇತ್ಯಾದಿ ಪುಷ್ಪಗಳನ್ನು ಬುಟ್ಟಿಗಟ್ಟಲೆ ವಿವಿಧ ಹಣ್ಣುಗಳನ್ನು ಜೊತೆಯಲ್ಲಿ ತೆಗೆದುಕೊಂಡು ಹೋಗಿ ಅರ್ಪಿಸಿದುದು ಒಂದು ಅಪೂರ್ವ ಘಟನೆ.

**ಪುಷ್ಪವೃಷ್ಟಿಯಲ್ಲಿ ಆತ್ಮಾನಂದ :**

ಶ್ರೀ ಸಿದ್ಧರಾಮಣ್ಣನವರು ಜೀವನದ ಅವಿಭಾಜ್ಯ ಅಂಗವಂತೆ ನಡೆಸಿಕೊಂಡ ಬಂದ ಈ ಪುಷ್ಪವೃಷ್ಟಿಯ ಕೈಂಕರ್ಯ ಕೆಲವರಿಗೆ ವಿಚಿತ್ರವಾಗಿ ಕಂಡು ಅದು ದುಂದು ವೆಚ್ಚವೆಂದು ಭಾವಿಸಿ ಈ ಬಗ್ಗೆ ಪ್ರಸ್ತಾಪಿಸಿದಾಗ ಅವರು ಕೊಟ್ಟ ಉತ್ತರ "ಯಾರು ಏನೇ ಹೇಳಿ, ನನಗೆ ಅದು ಸಂತೋಷ ಕೊಡುತ್ತೆ, ಅದನ್ನು ನೋಡಿ ಆತ್ಮಾನಂದ ಪಡೋನು ನಾನು. ಅದರಿಂದ ನನಗೆ ಮಾನಸಿಕ ನೆಮ್ಮದಿ ಸಿಕ್ಕುತ್ತೆ, ಅಷ್ಟು ಸಾಕು." ಅವರ ಈ ಮಾತುಗಳನ್ನು ಕೇಳಿದ ಮೇಲೆ ಟೀಕೆ ಮಾಡಿದವರು ಸದ್ದಿಲ್ಲದೆ ಜಾಗ ಖಾಲಿ ಮಾಡಿದರು.

ಶ್ರೀ ಸಿದ್ಧರಾಮಣ್ಣವರಿಗೆ ಮಕ್ಕಳ ಭಾಗ್ಯ ಇರಲಿಲ್ಲ. ಹುಟ್ಟಿದ ಎರಡು ಗಂಡು, ಒಂದು ಹೆಣ್ಣು ಅಲ್ಪಕಾಲದಲ್ಲಿಯೇ ತೀರಿ ಹೋದವು. ಆಗ ಅನೇಕ ಬಂಧುಗಳು, ಆಪ್ತರು ಇನ್ನೊಂದು ಮದುವೆ







ಮಾಡಿಕೊಳ್ಳಲು ಒತ್ತಾಯ ಮಾಡಿದರು. ಕೆಲವರು ನಮ್ಮಲ್ಲಿಯೇ ಒಂದು ಮಗುವನ್ನು ದತ್ತು ತೆಗೆದುಕೊಳ್ಳಿ, ಇಲ್ಲದೆ ಹೋದರೆ ಆಸ್ತಿಯಲ್ಲ ಅನ್ಯರ ಪಾಲಾಗುತ್ತದೆ ಎಂದು ಸಲಹೆ ನೀಡಿದರೂ, ಅವರ ಯಾವ ಸಲಹೆಗಳು ಸಿದ್ಧರಾಮಣ್ಣನವರ ಮನಸ್ಸನ್ನು ನಾಟಲಿಲ್ಲ. ಅವರ ಸ್ಥಿತಪ್ರಜ್ಞತ್ವದ ಮುಂದೆ ಅವೆಲ್ಲ ಬಿರುಗಾಳಿಗೆ ತರಗೆಲೆಗಳು ತೂರಿ ಹೋದಂತಾಯಿತು. ಸಲಹೆ ನೀಡಿದವರು ಬಂದ ದಾರಿಗೆ ಸುಂಕವಿಲ್ಲವೆಂದು ಮರು ಮಾತನಾಡಲಿಲ್ಲ.

**ಸಮಾಜಕ್ಕೆ ಸಮರ್ಪಣೆ :**

ತಾವು ಕಷ್ಟಪಟ್ಟು ಗಳಿಸಿದ ಹಣ, ಆಸ್ತಿ, ಸಮಾಜದ ಒಳಿತಿಗಾಗಿ ವಿನಿಯೋಗವಾಗಬೇಕೆಂಬ ಸದುದ್ದೇಶದಿಂದ ಒಂದು ಟ್ರಸ್ಟ್‌ನ್ನು ರಚಿಸಬೇಕೆಂಬ ಇಂಗಿತವನ್ನು ಸ್ನೇಹಿತರ ಮುಂದೆ ಹೇಳಿಕೊಂಡರು. ಅವರೆಲ್ಲರು ಸಂತೋಷದಿಂದ ಒಪ್ಪಿಗೆಯನ್ನು ನೀಡಿದರು. ಕೆಲವು ದಿನಗಳಲ್ಲಿಯೆ ಟ್ರಸ್ಟ್ ಡೀಡ್ ಸಿದ್ಧವಾಯಿತು. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರನ್ನು ಅಧ್ಯಕ್ಷರನ್ನಾಗಿಯೂ, ಶ್ರೀ ಟಿ.ಎನ್. ಕೆಂಪಹೊನ್ನಯ್ಯನವರನ್ನು ಕಾರ್ಯದರ್ಶಿಯನ್ನಾಗಿಯೂ, ಶ್ರೀ ಬಿ.ಸಿ. ನಂಜುಂಡಯ್ಯ, ಶ್ರೀ ಡಿ.ಎಸ್. ಮಲ್ಲಪ್ಪ, ಶ್ರೀ ಕೆ. ಚೆನ್ನಬಸಪ್ಪ, ಶ್ರೀ ಡಿ. ರೇವಣ್ಣ ಮತ್ತು ಶ್ರೀ ಜಿ.ಎಂ. ಸಿದ್ಧರಾಮಣ್ಣನವರೂ ಸದಸ್ಯರಾಗಿಯೂ, ಹೀಗೆ ಒಟ್ಟು ಸೇರಿದಂತೆ ಐವರು ಏಳು ಮಂದಿ ಧರ್ಮದರ್ಶಿಗಳನ್ನು ಗೊತ್ತು ಮಾಡಿದರು. ಟ್ರಸ್ಟ್ ಡೀಡ್‌ನಲ್ಲಿ ತಾವು ನೀಡಿದ ಚರ ಹಾಗೂ ಸ್ಥಿರ ಆಸ್ತಿಗಳನ್ನೆಲ್ಲಾ ಹೇಗೆ ವಿನಿಯೋಗಿಸಬೇಕೆಂದು ತಿಳಿಸಲಾಗಿದೆ.

ಟ್ರಸ್ಟ್‌ನ್ನು ರಚಿಸುವ ನಿರ್ಧಾರ ತೆಗೆದುಕೊಂಡ ದಿನ ಅವರು ತಮ್ಮ ಧರ್ಮಪತ್ನಿಯ ಮುಂದೆ 'ನನ್ನ ಕೈಲಿ ಒಂದೂ ಕಾಸೂ ಇಟ್ಟುಕೊಳ್ಳುವುದಿಲ್ಲ. ಎಲ್ಲವನ್ನು ದಾನ ಮಾಡಿ ಬಿಡುತ್ತೇನೆ' ಎಂದರಂತೆ. ಅವರ ಸ್ವಭಾವವನ್ನು ಅರ್ಥಮಾಡಿಕೊಂಡಿದ್ದ ಸೋಮಕ್ಕನವರು ನಂಬಲಿಲ್ಲವಂತೆ. ಏಕೆಂದರೆ ಅದುವರೆಗೂ ಯಾರಿಗೂ ಅವರು ಸಹಾಯ ಮಾಡದ ಕೃಪಣರು. ತಮಾಷೆಗಾಗಿ ಹೇಳುತ್ತಿರಬೇಕು ಎಂದು ಭಾವಿಸಿ 'ದಾನ ಮಾಡಿ ನೋಡೋಣ' ಎಂದರಂತೆ. ನಂತರ ತಮ್ಮ ಪತಿ ಮಾತಿನಂತೆ ನಡೆದುಕೊಂಡಿದ್ದನ್ನು ಕೇಳಿ ಆಶ್ಚರ್ಯದ ಜೊತೆಗೆ ಈ ಪುಣ್ಯಕಾರ್ಯದಲ್ಲಿ ತಾನು ಭಾಗಿಯಾಗುವ ಸದಾವಕಾಶ ದೊರೆಯಿತಲ್ಲ ಎಂದು ಸಂತೋಷ ಪಟ್ಟರಂತೆ.

ಟ್ರಸ್ಟ್‌ನ ಉದ್ದೇಶಗಳಲ್ಲಿ ಕೆಲವನ್ನು ದಾಖಲಿಸಿದರೆ ಶ್ರೀ ಸಿದ್ಧರಾಮಣ್ಣನವರು ಸಮಾಜದ ಬಗ್ಗೆ ಇಟ್ಟಿರುವ ಪ್ರೀತಿ, ಗೌರವ, ಹೃದಯ ಶ್ರೀಮಂತಿಕೆಯುನ್ನು ಸೂಚಿಸುತ್ತದೆ. **ದಿಕ್ಕಿಲ್ಲದ ವೀರಶೈವರಿಗೆ ಆಶ್ರಯ ನೀಡಬಲ್ಲ ಒಂದು ಅನಾಥಾಲಯವನ್ನು ಸ್ಥಾಪಿಸಬೇಕು, ಸರ್ಕಾರದ ಖಜಾನೆಯಲ್ಲಿ ಧರ್ಮದತ್ತಿ ನಿಧಿಯೊಂದನ್ನಿಟ್ಟು ಅದರಿಂದ ಬರುವ ಬಡ್ಡಿ ಹಣದಿಂದ ಧರ್ಮಕಾರ್ಯಗಳನ್ನು ನಡೆಸಬೇಕು. ವಿದ್ಯಾಮಂದಿರಗಳನ್ನು ತೆರೆಯಬೇಕು, ಬಡ ಹೆಣ್ಣು ಮಕ್ಕಳಿಗೆ ಮತ್ತು ಗಂಡು ಮಕ್ಕಳಿಗೆ ಪ್ರತ್ಯೇಕವಾಗಿ ಉಚಿತ ವಿದ್ಯಾರ್ಥಿ ನಿಲಯಗಳನ್ನು ಆರಂಭಿಸಬೇಕು, ಮಕ್ಕಳ ಜ್ಞಾನರ್ಜನೆಗಾಗಿ ಪುಸ್ತಕ ಭಂಡಾರಗಳನ್ನು ತೆರೆಯಬೇಕು.**

ಶ್ರೀ ಸಿದ್ಧರಾಮನಣ್ಣವರು ತಮ್ಮ ಎಲ್ಲಾ ಸಂಪತ್ತನ್ನು ಟ್ರಸ್ಟ್‌ಗೆ ನೀಡಿದ ಮೇಲೆ ಸ್ವಂತಕ್ಕೆಂದು ಒಂದು ರೂಪಾಯಿಯನ್ನು ಬಳಸಿಕೊಳ್ಳಲಿಲ್ಲ. ವ್ಯಾಪಾರವನ್ನು ಮುಂದುವರಿಸಿ ಅದರಿಂದ ಬಂದ ಗಳಿಕೆಯಲ್ಲಿ ಸ್ವಲ್ಪ ಭಾಗವನ್ನು ತಮ್ಮ ಕುಟುಂಬ ನಿರ್ವಹಣೆಗಾಗಿ ಇಟ್ಟುಕೊಂಡು ಉಳಿದ ಹಣವನ್ನು ಸಮಾಜಕ್ಕೆ ವಿನಿಯೋಗಿಸಿದರು. ಬಸವಣ್ಣನವರ ಪ್ರಭಾವ ಅವರ ಮೇಲೆ ಪರೋಕ್ಷವಾಗಿ ಆಗಿರುವುದನ್ನು ಅವರ ಕಾಯಕ ನಿಷ್ಠೆಯಿಂದ ಗಮನಿಸಬಹುದು.

**ಸಾಂಸ್ಕೃತಿಕ ಕ್ಷೇತ್ರ :**

ಶ್ರೀ ಸಿದ್ಧರಾಮಣ್ಣನವರು ಸಮಾಜ ಸೇವೆಯಲ್ಲಿ ತಮ್ಮನ್ನು ಹಲವು ರೀತಿಯಲ್ಲಿ ತೊಡಗಿಸಿಕೊಂಡು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಲು ಯುವಕರಿಗೆ ಪ್ರೋತ್ಸಾಹ ಹಾಗೂ ಸಹಾಯ ನೀಡಿದರು. ಪ್ರತಿವರ್ಷ ಕಾಮನ ಹಬ್ಬ, ಗಣಪತಿ ಹಬ್ಬ, ರೇಣುಕ ಜಯಂತಿ, ಬಸವ ಜಯಂತಿ ಮೊದಲಾದ ಹಬ್ಬಗಳನ್ನು ಅರ್ಥಪೂರ್ಣವಾಗಿ ಆಚರಿಸಲು ಶ್ರೀಯುತರು ನೀಡುತ್ತಿದ್ದ ಪ್ರೋತ್ಸಾಹ, ಕೊಡುಗೆ ಅಪರಿಮಿತವಾದುದು. ಹಿಂದೂಗಳಿಗೆ ಪ್ರೋತ್ಸಾಹ ನೀಡಿದಂತೆ ಮುಸ್ಲಿಂ ಹಬ್ಬಗಳಲ್ಲಿ ಹುಲಿವೇಷವೂ ಸೇರಿದಂತೆ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಮುಕ್ತವಾಗಿ ಸಹಾಯ ಮಾಡುವುದರ ಮೂಲಕ ಸರ್ವಧರ್ಮ ಸಮನ್ವಯಕ್ಕೆ ಜೀವಂತ ಸಾಕ್ಷಿಯಾಗಿದ್ದರು.

**ಸಾಮಾಜಿಕ ಸೇವೆ :**

ನೇತ್ರದಾನಿ ಡಾ. ಎಂ.ಸಿ. ಮೋದಿಯವರಿಂದ ತುಮಕೂರಿನಲ್ಲಿ ಮೊಟ್ಟಮೊದಲ ಬಾರಿಗೆ ಉಚಿತ ನೇತ್ರ

ಚಿಕಿತ್ಸಾ ಶಿಬಿರವನ್ನು ಏರ್ಪಡಿಸಿದ ಹೆಗ್ಗಳಿಕೆ, ಸಾವಿರಾರು ಜನರಿಗೆ ಯಾವುದೇ ಕೊರತೆಯಾಗದಂತೆ ಊಟ, ವಸತಿಯನ್ನು ವ್ಯವಸ್ಥೆ ಮಾಡಿದ ಹೃದಯವಂತಿಕೆ. ಮಾಡಿದರೂ ಮಾಡಿದೆ ಎನ್ನದ ನಿರ್ಲಿಪ್ತತೆ.

ಶ್ರೀ ಸಿದ್ಧರಾಮಣ್ಣನವರು ತಮ್ಮ ಬದುಕನ್ನು ವ್ಯಾಪಾರ, ವ್ಯವಹಾರಕ್ಕಷ್ಟೇ ಸೀಮಿತಗೊಳಿಸಲಿಲ್ಲ. ಸ್ನೇಹಿತರ ಒತ್ತಾಯದಿಂದ ನಗರಸಭಾ ಚುನಾವಣೆಗೆ ಸ್ಪರ್ಧಿಸಿ ಪ್ರಚಂಡ ಬಹುಮತದಿಂದ ಆಯ್ಕೆಯಾದರು. ಅವರು ಮನಸ್ಸು ಮಾಡಿದ್ದರೆ ನಗರಸಭಾ ಅಧ್ಯಕ್ಷರಾಗ ಬಹುದಾಗಿತ್ತು. ಆದರೆ ಅವರು ಹಾಗೆ ಮಾಡಲಿಲ್ಲ. ತಮ್ಮ ಹಿಂದೆ ಇದ್ದ ಯುವಕರನ್ನು ಮುಂದೆ ಬಿಟ್ಟು ಎಲ್ಲ ರೀತಿಯ ಸಹಾಯ, ಪ್ರೋತ್ಸಾಹ ನೀಡಿದ ಸಂಪನ್ನರು.

**ಶ್ರೀ ಸಿದ್ಧಗಂಗಾ ತಾಂತ್ರಿಕ ಕಾಲೇಜು :**

ತುಮಕೂರಿನಲ್ಲಿ ಶ್ರೀ ಸಿದ್ಧಗಂಗಾ ತಾಂತ್ರಿಕ ಕಾಲೇಜು ಪ್ರಾರಂಭವಾಗಲು ಶ್ರೀ ಸಿದ್ಧರಾಮಣ್ಣನವರ ಕೊಡುಗೆ ಅಪರವಾದುದು. ಪರಮಪೂಜ್ಯ ಶ್ರೀಗಳವರ ಬಹುದಿನಗಳ ಕನಸನ್ನು ನನಸನ್ನಾಗಿ ಮಾಡಲು ಶ್ರೀಯುತರು ತೋರಿದ ಉತ್ಸಾಹ, ಆಸಕ್ತಿ, ಆರ್ಥಿಕ ಸಹಾಯವನ್ನು ಅವರೊಂದಿಗೆ ಕೈಜೋಡಿಸಿದ ದಾನಿಗಳು ಮುಕ್ತಕಂಠದಿಂದ ಶ್ಲಾಘಿಸಿದ್ದಾರೆ. ಅವರು ಸಂಸ್ಥೆಯ ಪ್ರಾರಂಭಕ್ಕೆ ಲಕ್ಷಾಂತರ ರೂ.ಗಳ ದೇಣಿಗೆಯನ್ನು ನೀಡಿದರಲ್ಲದೆ, ಇತರರಿಂದಲೂ ಕೊಡಿಸುವಲ್ಲಿ ಅವರು ವಹಿಸಿದ ಪಾತ್ರ ಅನುಪಮ ಹಾಗೂ ಅನುಕರಣೀಯ.

**ಪ್ರಶಸ್ತಿ :**

ಸಿದ್ಧರಾಮಣ್ಣವರು ಸಮಾಜಕ್ಕೆ ಸಲ್ಲಿಸಿದ ಅನುಪಮ ಸೇವೆಯನ್ನು ಮನಗೊಂಡ ಆಗಿನ ಮೈಸೂರು ಮಹಾರಾಜರಾದ ಶ್ರೀ ಜಯಚಾಮರಾಜೇಂದ್ರ ಒಡೆಯರು ೧೯೪೯ರಲ್ಲಿ ನಡೆದ ತಮ್ಮ ವರ್ಧಂತ್ಸುವಕ್ಕೆ ಕರೆಸಿಕೊಂಡು ಸಕಲ ಗೌರವದೊಂದಿಗೆ ಸನ್ಮಾನಿಸಿ "ಲೋಕಸೇವಾ ನಿರತ" ಎಂದು ಬಿರುದನ್ನು ದಯ ಪಾಲಿಸಿದರು. ಇದು ಆ ಕಾಲಕ್ಕೆ ತುಂಬಾ ಮಹತ್ವವಾದ, ಗೌರವಯುತವಾದ ಮಹೋನ್ನತ ಪ್ರಶಸ್ತಿಯಾಗಿತ್ತು. ಇಂಥ ವಿಶಿಷ್ಟವಾದ ಪ್ರಶಸ್ತಿಯನ್ನು ಸ್ವೀಕರಿಸುವಾಗ ಅವರು ಬೀಗಲಿಲ್ಲ. ನಮಗೆ ಯಾವ ಪ್ರಶಸ್ತಿ ಬಿರುದಾವಳಿಗಳು ಬೇಡವೆಂದು ಹಠ ಹಿಡಿದರೂ ಸ್ನೇಹಿತರ ಪ್ರೀತಿಯ ಒತ್ತಾಯಕ್ಕೆ ಮಣಿದು ಪ್ರಶಸ್ತಿ ಸ್ವೀಕರಿಸುವ ದೊಡ್ಡ ಮನಸ್ಸು ಮಾಡಿದರು. ಪ್ರಶಸ್ತಿ ಬಂದ ಶುಭ ಸಂದರ್ಭದಲ್ಲಿ ತುಮಕೂರಿನ ನಾಗರಿಕರು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ನಾಗರಿಕ ಸನ್ಮಾನವನ್ನು ಅಭೂತಪೂರ್ವವಾಗಿ ಏರ್ಪಡಿಸಿ ತಮ್ಮ ಸಂತೋಷ, ಗೌರವವನ್ನು ವ್ಯಕ್ತ ಪಡಿಸಿದ್ದು ತುಮಕೂರಿನ ಇತಿಹಾಸದಲ್ಲಿ ಮರೆಯಲಾಗದ ಅಪೂರ್ವ ಸುಸಂದರ್ಭ.

**ಲಿಂಗೈಕ್ಯ :**

ಅರವತ್ತು ಮೂರು ವಸಂತಗಳ ಬೇವು-ಬೆಲ್ಲವನ್ನು ಸಮಚಿತ್ತದಿಂದ ಸವಿದು ತಮ್ಮ ಬದುಕನ್ನು ಸಮಾಜಕ್ಕೆ ಅರ್ಪಿಸಿಕೊಂಡು ಅನನ್ಯ ಸೇವೆ ಸಲ್ಲಿಸಿದ ಶ್ರೀ ಸಿದ್ಧರಾಮಣ್ಣನವರು ದಿನಾಂಕ ೧೬-೮-೧೯೬೮ ರಂದು ಶಿವನೊಳಗೊಂದಾದರು. ಇಡೀ ತುಮಕೂರು ನಗರವೇ ದುಃಖಿತಪ್ತರಾಗಿ ಅಂಗಡಿ ಮುಂಗಟ್ಟುಗಳನ್ನು ಸ್ವಯಂ ಪ್ರೇರಿತರಾಗಿ ಮುಚ್ಚಿ ಮೃತರ ಆತ್ಮಕ್ಕೆ ಶಾಂತಿ ಕೋರಿದರು. ಅವರ ಅಂತಿಮ ಸಂಸ್ಕಾರ ಅವರ ಪ್ರೀತಿಗೆ ಪಾತ್ರವಾಗಿದ್ದ, ಬಸ್ ನಿಲ್ದಾಣದ ಹತ್ತಿರವಿರುವ ಟ್ರಸ್ಟ್ ನಿವೇಶನದಲ್ಲಿ ಪೂಜ್ಯ ಶ್ರೀಗಳವರ ದಿವ್ಯ ಸಮ್ಮುಖದಲ್ಲಿ ಸಮಾಧಿಕ್ರಿಯೆ ವಿಧಿವತ್ತಾಗಿ ನೆರವೇರಿತು.

ಶ್ರೀಮತಿ ಸೋಮಕ್ಕನವರು ತಮ್ಮ ಪತಿ ನಿಧಾನರಾದ ಮೇಲೆ ತಮ್ಮ ತವರು ಮನೆ ಕಡೆಯಿಂದ ಬಂದ ತಮ್ಮ ಸಮಸ್ತ ಆಸ್ತಿಯನ್ನೆಲ್ಲ ಪತಿಯ ಆದರ್ಶದ ಮುಂಬೆಳಕಿನಲ್ಲಿ ಸಮಾಜ ಕಾರ್ಯಕ್ಕೆ ವಿನಿಯೋಗಿಸಲು ತೀರ್ಮಾನಿಸಿದರು. ತಾವು ವಾಸವಾಗಿದ್ದ ದೊಡ್ಡಮನೆ ಯನ್ನು ಮಾರಿ ಹಣವನ್ನು ಟ್ರಸ್ಟ್‌ಗೆ ಸೇರಿಸಿಕೊಳ್ಳಲು ಅನುಮತಿ ನೀಡಿ, ತಾವು ವಿದ್ಯಾರ್ಥಿ ನಿಲಯದ ಒಂದು ಕೊಠಡಿಯಲ್ಲಿ ವಾಸ ಮಾಡುತ್ತ ಸರಳ ಜೀವನ ನಡೆಸಿದ ಮಹಾಸಾಧ್ವಿ, ತ್ಯಾಗ ಜೀವನಕ್ಕೆ ಜೀವಂತ ನಿದರ್ಶನ. ತಮ್ಮ ಪತಿಯ ಆದರ್ಶ ಗುಣಗಳನ್ನು ಮೈಗೂಡಿಸಿ ಕೊಂಡು ಜೀವನ ನಡೆಸಿದ ಈ ತ್ಯಾಗಜೀವಿ ೨೦೦೪ರಲ್ಲಿ ಇಹಲೋಕವನ್ನು ತ್ಯಜಿಸಿದರು. ಅವರಿಬ್ಬರ ಸಾತ್ವಿಕ ಬದುಕು ಇತರರಿಗೆ ಸ್ಫೂರ್ತಿ, ಆದರ್ಶ. ಇವತ್ತು ನಮ್ಮ ಕಣ್ಣು ಮುಂದೆ ಇಲ್ಲದೇ ಹೋದರೂ ಅವರು ಸಮಾಜಕ್ಕೆ ಮಾಡಿದ ಉಪಕಾರದಿಂದ ಚಿರಂಜೀವಿಯಾಗಿದ್ದಾರೆ.

*(ಮಾಹಿತಿ: ಲೋಕಸೇವಾ ನಿರತ ಜಿ.ಎಂ. ಸಿದ್ಧರಾಮಣ್ಣ, ಲೇ. ಟಿ.ಆರ್. ಮಹಾದೇವಯ್ಯ, ಸಿದ್ಧಗಂಗಾ ಪ್ರಕಾಶನ).*







# ವಚನಾಭಿವ್ಯಕ್ತಿಯಲ್ಲಿ ಶಿವಶರಣೆಯರ ನಿಲುವು

– ಡಾ. ರಾಜಶೇಖರ ಜಮದಂಡಿ *

ವಚನಕಾರರ ಚಳುವಳಿಯು ಸಾಹಿತ್ತಿಕವಾಗಿ, ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ, ಸಾಮಾಜಿಕವಾಗಿ ಮುಂತಾದ ಕ್ಷೇತ್ರಗಳಲ್ಲಿ ಮಾಡಿದ ಕಾರ್ಯಗಳು ಅನನ್ಯ ಮತ್ತು ಅಭೂತಪೂರ್ವ. ತಮ್ಮ ಜ್ಞಾನದ ಮೂಲಕ ನುಡಿದ ನುಡಿಗಳೇ ವಚನಗಳಾಗಿ ಹೊರಹೊಮ್ಮಿವೆ. ಲೋಕದ ಡೊಂಕನ್ನು ಸರಿಪಡಿಸುವ, ಲೋಕದ ಸಕಲ ವಸ್ತುಗಳ ಅಂತಃಸೌಂದರ್ಯವನ್ನು ಕುಳಿತಲ್ಲಿಂದಲೇ ದರ್ಶಿಸುವ, ತಮ್ಮ ತನುಮನವನ್ನು ಸರಿಪಡಿಸಿಕೊಳ್ಳುವ ಸಮಷ್ಟಿಪ್ರಜ್ಞೆಯು ಅವರಲ್ಲಿ ಮೈತುಂಬಿಕೊಂಡಿತ್ತು. ಯಾವುದೇ ಹೊಗಳಿಕೆ-ತೆಗಳಿಕೆಗಳಿಗೆ ಕಿವಿಗೊಡದೇ ಆತ್ಮಸ್ಥೈರ್ಯದಿಂದ ಮುನ್ನುಗ್ಗಿ ಸತ್ಯಶೋಧನೆಗಾಗಿ ತಮ್ಮ ಬಾಳನ್ನೇ ಸವೆಸಿದವರು. ಹೀಗಾಗಿ ವಿಶ್ವಮಟ್ಟದ ಸಾಹಿತ್ಯಕ್ಕೆ ಸರಿ ಸಮವಾಗಿ ನಿಲ್ಲಬಲ್ಲ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಶಿವಶರಣ ಶರಣೆಯರ ವಚನ ಸಾಹಿತ್ಯವು ತುಂಬಾ ಮೌಲ್ಯಯುತವಾದುದೆಂದು ಕರೆಯುತ್ತೇವೆ. ಇತರೆ ಸಾಹಿತ್ಯಕ್ಕಿಂತ ವಚನ ಸಾಹಿತ್ಯದಲ್ಲಿ ಕಂಡುಬರುವ ವೈಚಾರಿಕ ಅಂಶಗಳನ್ನು ಗಮನಿಸಿದಾಗ "ವಚನಗಳು ಶರಣ ಸಮಾಜದ ಭಕ್ತಿ ಸಂಸ್ಕೃತಿಯ ನಿರೂಪಕ ಸೂತ್ರಗಳಾಗಿ" ಹೊರಹೊಮ್ಮಿವೆ. ಅನುಭವದಿಂದ ಅರ್ಜಿಸಿದ ಅನುಭಾವವನ್ನು ಅಭಿವ್ಯಕ್ತಿಸಲು ಆದ್ಯರು ಬಳಸಿದ ಒಂದು ಹೊಸ ಮಾಧ್ಯಮವೇ ವಚನ.

ಕ್ರಿ.ಶ. ಸುಮಾರು ೧೦೭೯-೧೧೨೭ ರಲ್ಲಿ ಬದುಕಿದ್ದ ದಾಸಿಮಯ್ಯ ಮತ್ತು ಆತನ ಹೆಂಡತಿ ದುಗ್ಗಳೆ ಶರಣ ದಂಪತಿಗಳು ಈ ಮಾಧ್ಯಮವನ್ನು ಆರಂಭಿಸಿದರು. ಆರಂಭದಲ್ಲಿ ವಚನಗಳ್ನು ಅನುಭವ-ಅನುಭಾವ ಸಂವೇದನೆಗಳನ್ನು ಅಭಿವ್ಯಕ್ತಿಸಲು ಮಾಧ್ಯಮವಾಗಿ ಬಳಸಿಕೊಂಡರು. ಈ ವಚನಗಳ ರಚನಾ ಕೌಶಲ್ಯದ ಸಂಸ್ಕೃತಿಯನ್ನು ಶಿವಶರಣರು ಪ್ರತಿನಿಧಿಸುವಂತೆ ಮುಂದೆ ಬಂದ ಅನೇಕ ಶಿವಶರಣೆಯರೂ ಸಹ ಈ ಸಂಸ್ಕೃತಿಯನ್ನು ಪ್ರತಿನಿಸುವ ಅಕ್ಷಯ ನಿಧಿಗಳಾದರು.

೧೨ನೇ ಶತಮಾನದಲ್ಲಿ ನಡೆದ ಪಿತೃಪ್ರಧಾನ ಕುಟುಂಬದಲ್ಲಿ ಹೆಣ್ಣು ಅನುಭವಿಸುತ್ತಿದ್ದ ಶೋಷಣೆಯನ್ನು ಹೋಗಲಾಡಿಸಲು ವಚನಗಾರ್ತಿಯರು ಶ್ರಮಿಸಿದ್ದುಂಟು. ಲೌಕಿಕ ಮತ್ತು ಅಲೌಕಿಕ ನೆಲೆಯಲ್ಲಿ ಪುರುಷನಿಗಿರುವಂತೆಯೇ ಸಮಾನ ಅವಕಾಶಗಳನ್ನು ಸ್ತ್ರೀಯರಿಗೂ ವಿಸ್ತರಿಸಲಾಗಿತ್ತು. ಯಾವ ಕ್ಷೇತ್ರದಿಂದ ಮಹಿಳೆ ಮೂಲೆಗುಂಪಾಗಿದ್ದಳೋ ಅಥವಾ ವಂಚನೆಗಳಿಗೊಳಗಾಗಿದ್ದಳೋ ಅದೇ ಮಹಿಳೆ ತನ್ನ ಅನುಭವವನ್ನು ಪಡೆದು ಅದನ್ನು ವಚನಗಳ ಮೂಲಕ ಅಭಿವ್ಯಕ್ತಿಸಿದ್ದು ಅನುಕರಣೀಯ. ಈ ಕಾಲಘಟ್ಟದಲ್ಲಿ ಅನೇಕ ಸಂಖ್ಯೆಯಲ್ಲಿದ್ದ ಶರಣೆಯರು ಆತ್ಮಕ್ಕೆ ಲಿಂಗಭೇದವಿಲ್ಲವೆಂಬ ತಾರಕ ಮಂತ್ರದಿಂದ ವಚನಗಳ ರಚಿಸಿ ಬೆರಗು ಮೂಡಿಸಿದರು. ಒಂದು ಸುಂದರ ಸಮಾಜ ಸೃಷ್ಟಿಗೆ ಕಾರಣೀಕರ್ತರಾದ ಅಂದಿನ ಪುರುಷರಂತೆಯೇ ಸ್ತ್ರೀಯರೂ ಸಹ ಸಾಧಕಿಯರಾಗಿ ಮಹೋನ್ನತ ವಿಚಾರಗಳನ್ನು ಪ್ರತಿಬಿಂಬಿಸಿದ್ದಾರೆ.

ಈ ಶತಮಾನವು ಅನುಭವ ಮತ್ತು ಅಭಿವ್ಯಕ್ತಿಗಳ ವಿಷಯದಲ್ಲಿ ಕ್ರಾಂತಿಕಾರಕ ಬದಲಾವಣೆ ಕಂಡ ಯುಗವಾಗಿದೆ. ಹಳೆಯ ಕಂದಾಚಾರಗಳನ್ನು ಮೂಲೆಗೊತ್ತಿ ಹೊಸ ಆದರ್ಶಗಳನ್ನು ಜನರಲ್ಲಿ ಬಿತ್ತಿ ಬೆಳೆದ ಸಮೃದ್ಧವಾದ ಕಾಲವದು. ಶಿವಶರಣರು ತಮ್ಮ ತಮ್ಮ ಕಾಯಕದಲ್ಲಿ ನಿರತರಾಗಿ ಪ್ರತಿಫಲ ಬಯಸದೇ ನಿಸ್ವಾರ್ಥದಿಂದ ಬಾಳಿ ಬೆಳಗಿದವರು. ಶಿವಶರಣೆಯರೂ ಸಹ ತಮ್ಮ ತಮ್ಮ ಗಂಡಂದಿರಂತೆಯೇ ಪಾಲಿಗೆ ಬಂದ ಕಾಯಕದಲ್ಲಿ ತೊಡಗಿ ಅಚ್ಚುಕಟ್ಟಾಗಿ ಸಂಸಾರ ನಿರ್ವಹಿಸಿದವರು. ಹಾಗೆಯೇ ಗಂಡಂದಿರು ಮೈಮರೆತು ಲೌಕಿಕ ಆಸೆ ಆಮಿಷಗಳಿಗೆ ಬಲಿಯಾದಾಗ ಎಚ್ಚರಿಕೆ ನೀಡಿದವರು. ಅಲ್ಲದೆ ತನು ಮನ ಧನಗಳನ್ನು ಶಿವನಿಗರ್ಪಿಸಿ ಆತ್ಮಾನುಭವಕ್ಕಾಗಿ ಹಾತೊರೆದಾಗ ತಮಗಾದ ಅನುಭವಗಳನ್ನು ವಚನಗಳ ಮೂಲಕ ಸಾಕ್ಷಾತ್ಕರಿಸಿದವರು.

ಈ ಶತಮಾನದಲ್ಲಿ ಸ್ತ್ರೀಯರಿಗೆ ದೊರೆತ ಸ್ವಾತಂತ್ರ್ಯದ ಪರಿಧಿ ವಿಶಾಲವಾಗಿತ್ತು. ಬಸವಣ್ಣನವರು ಕಟ್ಟಿದ ಅನುಭವ ಮಂಟಪದಲ್ಲಿ ಪುರುಷನಿಗೆ ಸರಿಸಮಾನವಾಗಿ ಕೂತು ಆಧ್ಯಾತ್ಮದ ಚರ್ಚೆಯಲ್ಲಿ ಭಾಗವಹಿಸಿ ತಾವೂ ವಚನಗಳನ್ನು ರಚೆ ಮಾಡಿದ್ದೂ ನಿಜಕ್ಕೂ ಚರಿತ್ರಾರ್ಹವಾಗಿದೆ. ಶರಣರಂತೆ

* ಬಸವಕೃಪ, ಬಾಲಾಜಿ ಬಡಾವಣೆ, ಪಟೇಲ್ ಹೈಸ್ಕೂಲ್ ಹತ್ತಿರ, ಬಳ್ಳಾರಿ ರಸ್ತೆ, ಹೊಸಪೇಟೆ-೫೮೩ ೨೦೧. ಬಳ್ಳಾರಿ ಜಿಲ್ಲೆ ಮೊ: ೯೭೪೫೨೮೧೩೧೩

ವಚನಗಳಲ್ಲಿ ದೇವರು, ಭಕ್ತಿ, ಸಮಾಜ, ಸಂಸಾರ, ಆಚಾರ-ವಿಚಾರ ಮುಂತಾದವುಗಳ ಪ್ರಸ್ತಾಪದ ನಿಲುವನ್ನು ಶರಣೆಯರಲ್ಲಿಯೂ ಸಹಜವಾಗಿ ಕಾಣುತ್ತೇವೆ. ಅವರ ವಿಚಾರ ತೀಕ್ಷ್ಣತೆಯು ಅಜ್ಞಾನದ ಕತ್ತಲೆಯಿಂದ ಅರಿವಿನ ಬೆಳಕಿನೆಡೆಗೆ ನಡೆಸಲು ಸಾಧ್ಯವಾಗಿದೆ. ಜನರಲ್ಲಿ ಆವರಿಸಿದ್ದ ಮೂಢನಂಬಿಕೆಗಳ ತೆರೆಮರೆಯಿಂದ ಹೊರತಂದು ಮೋಕ್ಷ ಮಾರ್ಗದೆಡೆಗೆ ನಿಲ್ಲಿಸುವ ಅವರ ಪ್ರಯತ್ನದ ನಿಲುವು ಅಮೋಘವಾದುದು.

ಉದಾಹರಣೆಗಾಗಿ ಶರಣೆಯರಲ್ಲಿ ಒಂದಿಬ್ಬರ ವಚನಗಳನ್ನು ಇಲ್ಲಿ ಅವಲೋಕಿಸಲಾಗಿದೆ. ಅಂದರೆ ಅಭಿವ್ಯಕ್ತಿಯಲ್ಲಿರುವ ಅವರ ನಿಲುವುಗಳನ್ನು ನೋಡಿದಾಗ ಅವು ಇಂದಿಗೂ ಪ್ರಸ್ತುತವೆನಿಸುವುದರಲ್ಲಿ ಸಂದೇಹವಿಲ್ಲ. 'ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆನ್ನಮಲ್ಲಿಕಾರ್ಜುನನೇ ತನ್ನ ಗಂಡನೆಂದು' ಭಾವಿಸಿಕೊಂಡಿದ್ದ ಅಕ್ಕಮಹಾದೇವಿಯು ಈ ಸಾವಕೊಡುವ ಲೌಕಿಕ ಗಂಡಂದಿರನ್ನೆಲ್ಲ ಒಲೆಯೊಳಗಿಕ್ಕೆಂದು ಹೇಳುತ್ತಾಳೆ. ಇಲ್ಲಿ ಆಕೆಯ ನಿಲುವನ್ನು ನೋಡಿದಾಗ ಶರಣಸತಿ-ಲಿಂಗಪತಿಯೆಂಬ ಸತಿಪತಿ ಭಾವದ ಲಿಂಗಾಂಗ ಸಾಮರಸ್ಯ ಸಾಧಿಸಲು ಹೊರಟ ಪರಿ ಅಪೂರ್ವವಾದುದಾಗಿದೆ. ಇಹಪರಗಳ ನಡುವೆ ತಾನನುಭವಿಸಿದ ಮಾನಸಿಕ ತೊಳಲಾಟ ಹಾಗೂ ಪರಿತಾಪಗಳನ್ನು ಹೀಗೆ ಹೊರಹಾಕಿದ್ದಾಳೆ.

**ಕಾಣುತ್ತ ಕಾಣುತ್ತ ಕಂಗಳ ಮುಚ್ಚಿದೆ ನೋಡವ್ವಾ**
**ಕೇಳುತ್ತ ಕೇಳುತ್ತ ಮೈಮರೆದೊರಗಿದೆ ನೋಡವ್ವಾ**
**ಹಾಸಿದ ಹಾಸಿಗೆಯ ಹಂಗಿಲ್ಲದೆ ಹೋಯಿತ್ತು ಕೆಳದಿ**
**ನಾನೇನೆಂದರಿಯದೆ ಮರೆದೆ ನೋಡವ್ವಾ.**

ಆಧ್ಯಾತ್ಮ ಶಿಖರದ ಔನತ್ಯವನ್ನೇರಿದ ಅಕ್ಕ ಸಾಂಪ್ರದಾಯಿಕವಾದ ಸಾಂಸಾರಿಕ ಸಂಕೋಲೆಗಳನ್ನು ತಿರಸ್ಕರಿಸಿ ಚೆನ್ನಮಲ್ಲಿಕಾರ್ಜುನನಲ್ಲಿ ತಾನು ಒಂದಾಗುವ ತನ್ಮಯತೆಯನ್ನು ಪ್ರತಿಕ್ರಿಯಿಸಿದ್ದಾಳೆ. ಲೌಕಿಕವಾಗಿ ಅನುಭವಿಸುವ ತಳಮಳವನ್ನು ಮನಸ್ಸಿನಲ್ಲಿಯೇ ಅದಕ್ಕೆ ಮೂರ್ತರೂಪ ನೀಡಿ ರಸಾನುಭವದಲ್ಲಿ ಲೀನವಾಗಿರುವುದನ್ನು ಈ ವಚನದಲ್ಲಿ ಹೇಳಿಕೊಂಡಿದ್ದಾಳೆ.

ನೀತಿ ನಿಯಮ ನಿಷ್ಠೆಗಳ ಬೋಧೆಯೆಂಬುದು ಕೇವಲ ಸ್ತ್ರೀಯರಿಗಾಗಿಯೇ ಎಂದು ಹೇಳುವ ಕಾಲ ವಚನಪೂರ್ವದಲ್ಲಿತ್ತು. ಅಂದರೆ ಮಹಿಳೆಯರಿಗೆ ಧಾರ್ಮಿಕ, ಸಾಮಾಜಿಕ, ಅಧ್ಯಾತ್ಮಿಕ, ನೈತಿಕ ಕ್ಷೇತ್ರಗಳಲ್ಲಿ ಅಷ್ಟೊಂದು ತಿಳಿದಿರುವುದಿಲ್ಲ. ಹಾಗಾಗಿ ಅವರಿಗೆ ನಿತ್ಯವು ಬೋಧನೆ ಅನಿವಾರ್ಯವಾಗಿತ್ತು.

ಆದರೆ ವಚನ ಚಳುವಳಿಯ ಸಂದರ್ಭದಲ್ಲಿ ಎಚ್ಚೆತ್ತುಕೊಂಡ ದಿಟ್ಟ ಮಹಿಳೆ ಎಲ್ಲ ವಿಷಯದಲ್ಲೂ ಆಸಕ್ತಿವಹಿಸಿದಳು. ಬದುಕಿನಲ್ಲಿ ಬರಬಹುದಾದ ಎಲ್ಲ ಆಗು-ಹೋಗುಗಳ ಕುರಿತು ಚಿಂತನ-ಮಂಥನ ಮಾಡಲಾರಂಭಿಸಿದಳು. ಕೇವಲ ನಾಲ್ಕು ಗೋಡೆಯ ಮಧ್ಯೆ ಭಕ್ತಿ, ಪೂಜೆ, ಮಡಿ, ನಿಯಮವೆಂದು ಸಮಯ ಕಳೆಯದೇ ಹೊರ ಜಗತ್ತಿನ ನೀತಿ-ರೀತಿಗಳ ಕಡೆಗೆ ಗಮನ ನೀಡಿದಳು. ಇದಕ್ಕೆಲ್ಲಾ ಅಂದಿನ ಪುರುಷ ಸಮಾಜವೂ ಮಹಿಳಾ ಚಿಂತನೆಗೆ ಕೈ ಜೋಡಿಸಿತ್ತು. ಯಾವ ಸ್ತ್ರೀ ಧರ್ಮ, ನೀತಿ, ಶಾಸ್ತ್ರ, ವೇದಾಧ್ಯಯನದಿಂದ ನೂರಾರು ಮೈಲಿ ದೂರವಿದ್ದಳೋ, ಯಾವ ಮಹಿಳೆ ಕಂದಾಚಾರ, ಮೂಢನಂಬಿಕೆಗೆ ಬಲಿಯಾಗಿ ಧಾರ್ಮಿಕವಾಗಿ ಅಸ್ಪೃಶ್ಯಳಾಗಿದ್ದಳೋ ಅಂತಹ ಮಹಿಳೆಯೇ ಧರ್ಮದ ಮುಖ್ಯವಾಹಿನಿಯಾದಳು. ಅಂತಹ ಮಹಿಳೆಯೇ ಹಾದಿ ತಪ್ಪಿದ ಪುರುಷರಿಗೆ ದಾರಿದೀಪವಾದಳು. ಆದರೂ ಅಲ್ಲೊಬ್ಬ ಇಲ್ಲೊಬ್ಬ ಪುರುಷರ ಕೊಂಕು ಮಾತುಗಳು ಮಹಿಳಾ ಸ್ವಾತಂತ್ರ್ಯ ಕುರಿತು ಕೇಳಿಬಂದಾಗ ಅಂತಹವರ ಸ್ವಭಾವವನ್ನು ಈ ವಚನದಲ್ಲಿ :

**ಗೂಗೆ ಕಣ್ಣ ಕಾಣಲರಿಯದೆ ರವಿಯ ಬಯ್ವುದು**
**ಕಾಗೆ ಕಣ್ಣ ಕಾಣಲರಿಯದೆ ಶಶಿಯ ಬಯ್ವುದು**
**ಕುರುಡ ಕಣ್ಣ ಕಾಣಲರಿಯದೆ ಕನ್ನಡಿಯ ಬಯ್ವುದು**
**ಇವರ ಮಾತೆಲ್ಲವೂ ಸಹಜವೆ ?**
**ನರಕ ಸಂಸಾರದಲ್ಲಿ ಹೊರಕುಳಿಗೊಳ್ಳುತ್ತ**
**ಶಿವನಿಲ್ಲ ಮುಕ್ತಿಯಿಲ್ಲ, ಹುಸಿಯೆಂದಡೆ**
**ನರಕದಲ್ಲಿಕ್ಕದೆ ಮುಕ್ತಿಯಿಲ್ಲ, ಹುಸಿಯೆಂದಡೆ**
**ನರಕದಲ್ಲಿಕ್ಕದೆ ಬಿಡುವನೆ**
**ಚೆನ್ನಮಲ್ಲಿಕಾರ್ಜುನಯ್ಯಾ**

**(ಶಿ.ವ.ಸಂ.೫. ಪು೪೨ ವ.೧೬೭)**

ಎಂದಿದ್ದಾಳೆ. ಅಂದರೆ ಅಂತರಂಗ ಶುದ್ಧವಿಲ್ಲದವರಲ್ಲಿ ಅಥವಾ ವ್ಯಷ್ಟಿಪ್ರಜ್ಞೆಯ ವಿಚಾರ ಮಾಡುವವರಿಗೆ ಬಹಿರಂಗದ ಪ್ರಕ್ರಿಯೆಗಳೆಲ್ಲಾ ಅರ್ಥವಾಗಲಾರವು. ಅಲ್ಲದೆ ಸಮಷ್ಟಿ ಪ್ರಜ್ಞೆಯ ಪರಿಚಯ ಸುಲಭವಾಗಿ ಆಗುವುದಿಲ್ಲ. ದೃಷ್ಟಿಯಂತೆ ಸೃಷ್ಟಿ ಎಂಬಂತೆ ಸ್ವಭಾವ ಬದಲಾಯಿಸಿಕೊಳ್ಳದಿದ್ದರೆ ಕಾಣುವ ಪ್ರತಿಯೊಂದು ವಸ್ತುವೂ ಅಸಮಂಜಸವಾಗಿಯೇ ಕಾಣಲ್ಪಡುತ್ತದೆ. ಅಂದರೆ ಹೆಣ್ಣು-ಗಂಡುವಿನ ಮಧ್ಯೆ ಮೇಲು-ಕೀಳು ಹುಡುಕುವ ಅಜ್ಞಾನಿ ಜನರ ಮನೋಭಾವ ವಿಚಿತ್ರವಾದುದು. ಈ ಮಾತುಗಳ ಹಿನ್ನೆಲೆಯಲ್ಲಿ ಅಕ್ಕನ ವಚನ ನೋಡಿದಾಗ ಹಗಲಿನಲ್ಲಿ ಕಣ್ಣು ಮುಚ್ಚಿದ ಗೂಗೆಗೆ ಸೂರ್ಯಪ್ರಕಾಶ ಕಾಣದೇ ಬಯ್ಯುವುದು, ರಾತ್ರಿ ಕಣ್ಣು





ಕಾಣದ ಕಾಗೆ ಚಂದ್ರನನ್ನು ಬಯ್ಯುವುದು ಹಾಗೆಯೇ ಹುಟ್ಟುಕುರುಡ ತನ್ನ ಮುಖ ನೋಡಿಕೊಳ್ಳಲಾಗದ ಕನ್ನಡಿಯನ್ನು ಬಯ್ಯುವುದು ಇದೆಲ್ಲಾ ಮನುಷ್ಯ ಸಹಜ ಸ್ವಭಾವವಾದರೂ ತಮ್ಮಲ್ಲಿರುವ ದೋಷಗಳ ಬಗೆಗೆ ಅವಲೋಕನ ಮಾಡಿಕೊಳ್ಳಲೇಬೇಕಲ್ಲವೆ ? ಅದೇ ರೀತಿ ಮನುಷ್ಯ ನರಕ ಸಂಸಾರವನ್ನು ನಂಬಿ ಮೋಕ್ಷ ದೊರೆಯಲಿಲ್ಲವೆಂದರೆ ಹೇಗೆ ? ಆ ಶಿವನನ್ನು ಬೈದು ಏನು ಪ್ರಯೋಜನ ? ಪ್ರಾಣಿಗಳಿಗಂತೂ ತಿಳುವಳಿಕೆಯಿಲ್ಲ. ಆದರೆ ಮನುಷ್ಯನಾದವನಿಗೆ ಯೋಚನಾ ಶಕ್ತಿಯಿದ್ದು ತಿಳುವಳಿಕೆ ಬೇಡವಾ ? ಎನ್ನುವ ಮಾರ್ಮಿಕವಾದ ಧ್ವನಿ ಈ ವಚನದಲ್ಲಿ ನೋಡಬಹುದು.

ಸತ್ಯಕ್ಕ ಎಂಬ ಶಿವಶರಣೆ ಕೂಡ ಶ್ರೇಷ್ಠ ವಚನಾಕಾರ್ತಿಯಾಗಿದ್ದಾಳೆ. ಈ ಶರಣೆ ಹೇಳುವಂತೆ ಬದುಕಿನಲ್ಲಿ ದುಡಿಮೆಗೆ ತಕ್ಕುದಾಗಿ ಏನು ದೊರೆಯುತ್ತದೆಯೋ ಅದನ್ನೇ ಶಿವಪ್ರಸಾದವೆಂದು ಭಕ್ತಿಯಿಂದ ಸ್ವೀಕರಿಸಬೇಕು. ಮೋಸ, ವಂಚನೆಗಳು ಕಾಯಕದಲ್ಲಿ ಇರಬಾರದೆಂದು ಹೇಳುತ್ತಾ :

**ಲಂಚ ವಂಚನಕ್ಕೆ ಕೈಯಾನದ ಭಾಷೆ**
**ಬಟ್ಟೆಯಲ್ಲಿ ಹೊನ್ನು ವಸ್ತ್ರ ಬಿದ್ದಿದ್ದಡೆ**
**ಕೈಮುಟ್ಟಿ ಎತ್ತಿದೆನಾದಡೆ ಅಯ್ಯಾ ನಿಮ್ಮಾಣೆ**
**ನೀವಿಕ್ಕಿದ ಭಿಕ್ಷೆಯೊಳಗಿಪ್ಪೆನಾಗಿ,**
**ಇಂತಲ್ಲದೆ ನಾನು ಅಳಿಮನವ ಮಾಡಿ**
**ಪರದೈವಕ್ಕೆ ಅಳಿ ಮಾಡಿದನಾದಡೆ,**
**ನೀನಾಗಲೇ ಎನ್ನ ನರಕದಲದ್ದಿ**
**ನೀನೆದ್ದು ಹೋಗಾ ಶಂಭುಜಕೇಶ್ವರ ದೇವಯ್ಯಾ ! ನಿಮ್ಮಾಣೆ.**

ಸತ್ಯಕ್ಕ ಬೇರೆಯವರ ಮನೆಯ ಅಂಗಳದಲ್ಲಿರುವ ಮತ್ತು ರಸ್ತೆಯಲ್ಲಿರುವ ಕಸವನ್ನು ಗೂಡಿಸಿ ಸ್ವಚ್ಛಗೊಳಿಸುವ ಕಾಯಕದೊಂದಿಗೆ ಅಂತರಂಗದ ಆಸೆ ಆಮಿಷಗಳ ಕಶ್ಮಲಗಳನ್ನು ಗುಡಿಸುವ ನೇಮವನ್ನಿಟ್ಟುಕೊಂಡಿದ್ದಾಳೆ. ಮನೆ ಮಾಲಿನ್ಯವಾದರಷ್ಟೇ ಅಲ್ಲ, ಮನ ಮಾಲಿನ್ಯದಿಂದ ಮುಕ್ತವಾಗಬೇಕು. ಹೀಗೆ ಸತ್ಯಕ್ಕನ ಬದುಕಿನ ವಿಚಾರಗಳು ಕಲ್ಪನೆಗೂ ನಿಲುಕಲಾರದ್ದು. ಆಕೆಯ ಕಾಯಕ ಸಣ್ಣದ್ದಾಗಿರಬಹುದು ಅಥವಾ ಘನತೆಯಿಲ್ಲದ್ದಾಗಿರಬಹುದು. ಆದರೆ ಅದರಿಂದ ಬಂದ ಹಣವನ್ನು ದಾಸೋಹಕ್ಕಾಗಿ ವಿನಿಯೋಗಿಸುವ ಚಿಂತನೆ ಮಹತ್ತರವಾದುದು. ಶರಣರ ಕಾಲದಲ್ಲಿಯೂ ಭ್ರಷ್ಟಚಾರ, ಲಂಗುಳಿತನ, ಬೆಲೆಯೇರಿಕೆ, ನಿರುದ್ಯೋಗ, ಮೋಸ, ವಂಚನೆಗಳು ಇದ್ದಾಗ್ಯೂ ಶರಣೆಯರೂ ಕೂಡ ತಮ್ಮ ಕಾಲ ಮೇಲೆ ತಾವು ನಿಂತು ಇತರರಿಗೆ ಮಾದರಿಯಾಗಿದ್ದರು. ಮನುಷ್ಯ ಜನ್ಮ ಪಾವನವಾದುದು. ಇದನ್ನು ತುಂಬಾ ಎಚ್ಚರಿಕೆಯಿಂದ ಕಾಪಾಡಿಕೊಳ್ಳಬೇಕಾದುದು ಪ್ರತಿಯೊಬ್ಬರ ಕರ್ತವ್ಯ. ಅಂತರಂಗದಲ್ಲಿ ದುರಾಲೋಚನೆಗಳ ಸುಳಿಗೆ ಸಿಕ್ಕಿ ಬಹಿರಂಗದಲ್ಲಿ ಕೇವಲ ಪೂಜೆ, ಅರ್ಚನೆ, ಮಂತ್ರಗಳ ಜಪಿಸಿದರೆ ಪ್ರಯೋಜನವಿಲ್ಲ ಎಂಬ ಅಂಶವನ್ನು ಸತ್ಯಕ್ಕ ಎಂಬ ವಚನಕಾರ್ತಿ ಇನ್ನೊಂದು ವಚನದಲ್ಲಿ ಹೀಗೆ ಹೇಳಿದ್ದಾಳೆ.

**ಅರ್ಚನೆ ಪೂಜೆ ನೇಮವಲ್ಲ**
**ಮಂತ್ರ ತಂತ್ರ ನೇಮವಲ್ಲ**
**ಧೂಪ ದೀಪಾರತಿ ನೇಮವಲ್ಲ**
**ಪರಧನ ಪರಸ್ತ್ರೀ ಪರದೈವಂಗಳಿಗೆರಗದಿಪ್ಪುದೆ ನೇಮ**
**ಶಂಭುಜಕೇಶ್ವರನಲ್ಲಿ ಇವು ಕಾಣಿರಣ್ಣಾ ನಿತ್ಯ ನೇಮ**

**(ಶಿ.ವ.ಸಂ.ಶಾ.ಪು. ೨೮೯, ವ ೯೫೯)**

ಮುಖವಾಡ ಧರಿಸಿ, ಭ್ರಮೆಯಲ್ಲಿ ಮುಳುಗಿ, ಅಸ್ತವ್ಯಸ್ತ ಮನದಿಂದ ಕ್ರಿಯೆಯಲ್ಲಿ ತೊಡಗಿದರೆ ಯಾವ ಪ್ರಯೋಜನಗಳಿಲ್ಲ ಎಂಬ ಸೂಕ್ಷ್ಮವನ್ನು ಈ ಮೇಲಿನ ವಚನದಲ್ಲಿ ಸತ್ಯಕ್ಕ ನಿರೂಪಿಸಿದ್ದಾಳೆ. ಅಂದರೆ ಬಾಹ್ಯಾಚರಣೆಗಳಿಗೆ, ಡಾಂಭಿಕತೆಗೆ ಬೆಲೆ ಕೊಡದೆ ಮನಶುದ್ಧಿಗೆ, ಅಂತರಂಗದ ಶೋಧನೆಗೆ ಈ ವಚನಕಾರ್ತಿ ಪ್ರಾಮುಖ್ಯತೆ ನೀಡುತ್ತಾ ಪರಧನ-ಪರಸ್ತ್ರೀ-ಪರದೈವಗಳಿಗೆ ಚಿತ್ತ ಚಂಚಲ ಮಾಡಿಕೊಳ್ಳದಿರುವ ಎಚ್ಚರಿಕೆಯನ್ನು ನೀಡಿದ್ದಾಳೆ. ಅಲ್ಲದೆ ತನ್ನ ಬದುಕಿನ ಆದರ್ಶಗಳೊಂದಿಗೆ ಸಮಾಜದ ಓರೆಕೋರೆಗಳನ್ನು ವಚನಗಳ ಮೂಲಕ ತಿದ್ದಿದ್ದಾಳೆ.

ಪರಮಾತ್ಮನನ್ನು ಒಲಿಸಿಕೊಳ್ಳುವಲ್ಲಿ ಇರಬೇಕಾದ ಭಕ್ತಿ, ನಿಷ್ಠೆ, ಶ್ರದ್ಧೆ, ಏಕಾಗ್ರತೆಗಳ ಸಮ್ಮಿಲನದ ಬಗೆಗೆ ಮೋಳಿಗೆ ಮಹಾದೇವಿಯು ತನ್ನ ವಚನದಲ್ಲಿ :

**ಮಣ್ಣನಿತ್ತು ನಿಮ್ಮ ಕಂಡೆಹೆನೆಂದಡೆ ಜಗಭರಿತ ನೀನು**
**ಹೊನ್ನನಿತ್ತು ನಿಮ್ಮ ಕಂಡೆಹೆನೆಂದಡೆ ಹಿರಣ್ಯಮೂರ್ತಿ ನೀನು**
**ಹೆಣ್ಣನಿತ್ತು ನಿಮ್ಮ ಕಂಡೆಹೆನೆಂದಡೆ ತ್ರಿವಿಧಶಕ್ತಿ ಮೂರ್ತಿ ನೀನು**
**ಮನವನಿತ್ತು ನಿಮ್ಮ ಕಂಡೆಹೆನೆಂದಡೆ ಮನೋಮೂರ್ತಿ ನೀನು**
**ಎನಗೇನು ನಿನಗಿತ್ತು ಕಾಣಿಕೆ ನೀನು ಸಿಕ್ಕುವುದಕ್ಕೆ**
**ಕ್ರಿಯೆಯಲ್ಲಿ ನಿರತ ಸ್ವಭಾವದಲ್ಲಿ ಶುದ್ಧ**
**ಹಿಡಿದು ಬಿಡದೆ ಬಿಟ್ಟುದ ಹಿಡಿಯದೆ**
**ನಿಶ್ಚಯವಾದ ನಿಜ ಜ್ಞಾನಿಗಳಲ್ಲಿ**
**ಬೆಚ್ಚಂತಿದ್ದಡೆ ನೀನು ಅಲ್ಲಿ ತಪ್ಪದಿಪ್ಪೆ**
**ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ.**

ಮೋಳಿಗೆ ಮಾರಯ್ಯನಂತೆ ಮಹಾಶಿವಶರಣೆ ಹಾಗೂ ಶಿವಭಕ್ತಳಾದ ಮೋಳಿಗೆ ಮಹಾದೇವಿಯು ಹೆಣ್ಣು ಹೊನ್ನು

ಮಣ್ಣುಗಳ ಆಸೆ ಆಮಿಷಗಳಿಗೊಳಗಾದ ಮನುಷ್ಯ ಅಲೌಕಿಕನಾದ ನಿನ್ನನ್ನು ಒಲಿಸಿಕೊಳ್ಳುವುದು ಕಷ್ಟಸಾಧ್ಯ ಎಂದಿದ್ದಾಳೆ. ಭಾವಶುದ್ಧತೆಯಲ್ಲಿ ಭಕ್ತಿ ಕ್ರಿಯೆಯೊಳಗೆ ಮುಳುಗಿದಾಗ ಮಾತ್ರ ನೀನು ಕರುಣೆ ತೋರುವಂಥವನು ಎಂಬ ಅಂಶವನ್ನು ಈ ವಚನದಲ್ಲಿ ಹೇಳಿದ್ದಾಳೆ. ನೀನು ಒಡ್ಡುವ ಪರೀಕ್ಷೆಯಲ್ಲಿ ಬೆದರದೆ, ಬೆಚ್ಚದೆ ಶ್ರದ್ಧಾಪೂರ್ಣವಾಗಿ ಪೂಜಿಸಿದಾಗ ಮಾತ್ರ ನೀನು ತಪ್ಪದೇ ನಮಗೆ ಮೋಕ್ಷದ ಹಾದಿ ತೋರುವಿ ಎಂಬ ಭಾವ ವ್ಯಕ್ತಪಡಿಸಿದ್ದಾಳೆ. ವಚನಗಾರ್ತಿ ಅಮುಗೆ ರಾಯಮ್ಮ ಸಮಾಜ ವಿಮರ್ಶೆಯನ್ನು ಅತಿ ತೀಕ್ಷ್ಣವಾಗಿ ಮಾಡಿದ್ದಾಳೆ. ಜ್ಞಾನಿಗಳೆಂದು ತಿರುಗುವ ವೇಷಧಾರಿ ವಿರಕ್ತರಿಗೆ ಮಾತಿನ ಚಾಟಿಯನ್ನು ಮುಟ್ಟಿಸಿ ಎಚ್ಚರಿಸಿದ್ದಾಳೆ.

**ಕಾವಿ ಕಾಷಾಂಬರವ ಹೊದ್ದು ಕಾಮವಿಕಾರಕ್ಕೆ**
**ತಿರುಗುವ ಕರ್ಮಿಗಳ ಮುಖವ ನೋಡಲಾಗದು**
**ಜಂಗಮವಾಗಿ ಜಗದಿಚ್ಛೆಯ ನುಡಿವ**
**ಜಂಗುಳಿಗಳ ಮುಖವ ನೋಡಲಾಗದು.**

ರಾಯಮ್ಮ ಸೊನ್ನಲಾಪುರದ ಸಿದ್ಧರಾಮನ ಸ್ಥಾವರದ ಸೇವೆಯನ್ನು ನಿರಾಕರಿಸಿ ಜಂಗಮತ್ವದ ಪೂಜೆಯನ್ನೊಪ್ಪಿ ಕೊಂಡವಳು. ಇಲ್ಲಿಯ ಆಕೆಯ ವಚನವು ಕಾಲ-ದೇಶಗಳನ್ನು ಮೀರಿನಿಂತಿದೆ. ಇಂದಿನಂತೆ ಅಂದೂ ಸಹ ಕಪಟ ವೇಷಧಾರಿಗಳ ಸ್ಥಿತಿ-ಗತಿಯನ್ನು ಬಯಲು ಮಾಡಿದ್ದಾಳೆ. ಸೋಗಲಾಡಿಗಳ ಮುಖ ನೋಡುವುದು ಅಸಹ್ಯ ವಾಗಿರುತ್ತದೆಂದು ಟೀಕಿಸಿದ್ದಾಳೆ.

೧೨ನೇ ಶತಮಾನದ ಶರಣೆಯರ ವಚನಗಳು ಅಕ್ಷರ ಜ್ಯೋತಿಗಳು. ಅವರ ಬರಹಗಳು ಕೇವಲ ಬುದ್ಧಿವಂತಿಕೆಯ ಉಪದೇಶವಲ್ಲ. ಆತ್ಮಮುಖಿಯಾಗಿ ಯೋಚಿಸುವಂತೆಯೇ ಲೋಕಾಭಿಮುಖಿಯಾಗಿ ಚಿಂತನೆಗೈದಿರುವುದು ಅವರ ಅನೇಕ ವಚನಗಳಲ್ಲಿ ಕಾಣುತ್ತೇವೆ. ಬಸವಣ್ಣನವರು ಹೇಳಿದಂತೆ "ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ" ಎಂಬ ಧ್ಯೇಯವನ್ನಳವಡಿಸಿಕೊಂಡು ಬದುಕಿ ಶಿವಶರಣೆಯ ರೆಂದೆನಿಸಿಕೊಂಡರು.

ಒಟ್ಟಾರೆ ಜೀವನಕ್ಕೆ ಅನ್ವಯವಾಗುವಂತೆ ಸಾಮಾಜಿಕ, ಸಾಹಿತ್ಯಿಕ, ಅಧ್ಯಾತ್ಮಿಕ, ಪ್ರಾಕೃತಿಕ, ಧಾರ್ಮಿಕ ಹೀಗೆ ಮೊದಲಾದ ನೆಲೆಗಳಲ್ಲಿ ತಮ್ಮದೇ ಛಾಪನ್ನು ಮೂಡಿಸುತ್ತಾ ವಚನಾಭಿವ್ಯಕ್ತಿಯಲ್ಲಿ ತೋರಿದ ಅವರ ನಿಲುವುಗಳು ಇಂದಿಗೂ ಪ್ರಸ್ತುತವಾಗಿವೆ. □

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಸದಸ್ಯರಾಗಿರುವುದು ಸಂತೋಷ. ಇದರಿಂದ 'ಸಿದ್ಧಗಂಗಾ' ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಕಾಗದ, ಮುದ್ರಣ, ಅಂಚೆ ವೆಚ್ಚ ಇನ್ನಿತರೆ ವೆಚ್ಚಗಳು ದುಬಾರಿಯಾಗಿದ್ದು, ಪತ್ರಿಕೆ ಮುನ್ನಡೆಸಲು ಕಷ್ಟವಾಗುತ್ತದೆ ಎಂಬುದನ್ನು ತಮ್ಮ ಗಮನಕ್ಕೆ ತರುತ್ತಲೇ ಬರುತ್ತಿದ್ದೇವೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦/-ರೂ ಆಜೀವ ಸದಸ್ಯರಾಗಲು ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ. ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಮುದ್ರಣ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಕೊರತೆಯನ್ನು ದಯವಿಟ್ಟು ಅರ್ಥಮಾಡಿಕೊಳ್ಳುವಿರೆಂದು ಭಾವಿಸಿದ್ದೇವೆ.

ಪ್ರಸ್ತುತ ಆಜೀವ ಚಂದಾ ೨೦೧೪ ವರ್ಷದಿಂದ ೧೫೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿರುವವರು ಬಾಕಿ ೫೦೦/- ಸಂದಾಯ ಮಾಡಲು ಕೋರಿದೆ.

ದಯಮಾಡಿ ತಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತವನ್ನು ಸಿದ್ಧಗಂಗಾ ಮಾಸಪತ್ರಿಕೆ ಹೆಸರಿನಲ್ಲಿ ನಗದು/ಚೆಕ್/ಡಿ.ಡಿ. ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ (LM) ಸಂಖ್ಯೆ ನಮೂದಿಸಿ ದೂರವಾಣಿ/ಮೊಬೈಲ್ ನಂಬರ್‌ನೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಕೊಡುವುದರ ಮೂಲಕ 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ. ವಿಳಾಸ ಬದಲಾವಣೆಯಾಗಿದ್ದರೆ ದಯವಿಟ್ಟು ಬದಲಾದ ವಿಳಾಸವನ್ನು ತಮ್ಮ (LM) ಸಂಖ್ಯೆಯೊಂದಿಗೆ ಕಳುಹಿಸಿಕೊಟ್ಟರೆ ಪತ್ರಿಕೆ ತಮಗೆ ತಲುಪಲು ಅನುಕೂಲವಾಗುತ್ತದೆ.

ಪ್ರಕಾಶಕರು, 'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.
ದೂರವಾಣಿ : 0816-2282322





# ಜಲಚಿಕಿತ್ಸೆ ಅಥವಾ ವಾಟರ್ ಥೆರಪಿ

– ಡಾ. ಆರ್. ಶಿವಣ್ಣ *

ಗುಣಪಡಿಸಲು ಚಿಕಿತ್ಸಾ ವಿಧಾನಗಳನ್ನೇ ಇನ್ನೂ ಕಂಡುಹಿಡಯದ ಅನೇಕ ದೈನಂದಿನ ರೋಗಗಳನ್ನು ಬಹಳ ಸುಲಭ ವಿಧಾನದಲ್ಲಿ ಗುಣಪಡಿಸುವ ಚಿಕಿತ್ಸಾ ವಿಧಾನಕ್ಕೆ ಜಲಚಿಕಿತ್ಸೆ ಅಥವಾ ವಾಟರ್ ಥೆರಪಿ ಎನ್ನುತ್ತಾರೆ. ಜಪಾನೀಸ್ ಸಿಕ್‌ನೆಸ್ ಅಸೋಸಿಯೇಶನ್ ಅನೇಕ ಪ್ರಯೋಗಗಳ ಆಧಾರದ ಮೇಲೆ ಹಲವಾರು ಸಾಮಾನ್ಯ ಖಾಯಿಲೆಗಳನ್ನು ಈ ಜಲಚಿಕಿತ್ಸಾ ವಿಧಾನದಿಂದ ಗುಣಪಡಿಸಬಹುದೆಂದು ಸಾಬೀತು ಪಡಿಸಿದೆ. ವಾಟರ್ ಥೆರಪಿಯಿಂದ ಪರಿಹಾರ ಕಂಡುಕೊಳ್ಳಬಹುದಾದ ಕೆಲವು ಸಾಮಾನ್ಯ ರೋಗಗಳೆಂದರೆ ತಲೆನೋವು, ರಕ್ತದ ಒತ್ತಡ, ಬೊಜ್ಜು, ಮಧುಮೇಹ, ಗ್ಯಾಸ್ಟ್ರಿಕ್, ಬೇಧಿ, ಮಲಬದ್ಧತೆ, ಅನಿಯಮಿತ ಋತುಚಕ್ರ, ಮೂತ್ರ ಸಂಬಂಧಿ ಖಾಯಿಲೆ ಮುಂತಾದವು.

**ಚಿಕಿತ್ಸ ವಿಧಾನ :**

ಜಲಚಿಕಿತ್ಸೆಯ ಮೂಲಕ ಈ ಮೇಲೆ ಸೂಚಿಸಿದ ರೋಗಗಳನ್ನು ಗುಣಪಡಿಸುವುದು ಅಸಂಭವವೆನಿಸಿದರೂ ಪ್ರಾಯೋಗಿಕವಾಗಿ ಸಾಬೀತಾದ ಹಿನ್ನೆಲೆಯಲ್ಲಿ ಈಚೆಗೆ ಅನೇಕ ವೈದ್ಯರು ಈ ಜಲಚಿಕಿತ್ಸೆ ಅಥವಾ ವಾಟರ್ ಥೆರಪಿಯನ್ನು ಶಿಫಾರಸ್ಸು ಮಾಡುತ್ತಿರುವುದು ಗಮನಾರ್ಹ ಸಂಗತಿ. ಮಾನವನ ಆರೋಗ್ಯ ಮುಖ್ಯವಾಗಿ ಜೀರ್ಣಾಂಗ ವ್ಯವಸ್ಥೆಯನ್ನು ಆಧರಿಸಿರುವುದು ಸರಿಯಷ್ಟೆ. ಸ್ವಾಮಿ ಪರಮಹಂಸ ಯೋಗಾನಂದಜೀಯವರು ಹೇಳಿರುವಂತೆ "ವರ್ಷದ ೩೬೫ ದಿನಗಳಲೂ ತಿನ್ನುತ್ತಲೇ ಇರುವುದರಿಂದ ಅನೇಕ ಖಾಯಿಲೆಗಳಿಗೆ ಕಾರಣವಾಗಿದೆ."

ಸರ್ವೇಸಾಮಾನ್ಯವಾಗಿ ಸಿಗುವ ಶುದ್ಧ ನೀರನ್ನು ಕುಡಿಯುವುದರಿಂದ ಜಠರವು ಸ್ವಚ್ಛಗೊಳ್ಳುವುದಲ್ಲದೆ ಕರುಳು ಹೀಮಾಟೋಪಾಸಿಸ್ ಎಂಬ ಶುದ್ಧ ರಕ್ತವನ್ನು ಉತ್ಪಾದಿಸಲು ಸಹಕರಿಸುತ್ತದೆ. ಈ ರಕ್ತ ರೋಗಕ್ಕೆ ಕಾರಣವಾದ ರೋಗಾಣುಗಳ ವಿರುದ್ಧ ಹೋರಾಡುತ್ತದೆ. ಹೀಗಾಗಿ ವಾಟರ್ ಥೆರಪಿ ಅನೇಕ ಖಾಯಿಲೆಗಳನ್ನು ಗುಣಪಡಿಸಬಹುದಾದ ಬಹಳ ಸುಲಭ ಚಿಕಿತ್ಸಾ ವಿಧಾನವಾಗಿದೆ.

**ಅಭ್ಯಾಸದ ವಿಧಾನ :**

ವಾಟರ್ ಥೆರಪಿ ಅಥವಾ ಜಲಚಿಕಿತ್ಸೆ ಸುಲಭ, ಸರಳ ದುಬಾರಿಯಲ್ಲದ ಚಿಕಿತ್ಸಾ ವಿಧಾನ. ಮುಂಜಾನೆ, ದೈನಂದಿನ ಶೌಚಕಾರ್ಯಗಳಿಗೂ ಮೊದಲು ೫ ಲೋಟಗಳಷ್ಟು (೧.೨೬ ಕೆ.ಜಿ. ಅಥವಾ ೧.೨೬ ಲೀಟರ್) ಶುದ್ಧ ನೀರನ್ನು ಒಂದೇ ಬಾರಿಗೆ ಕುಡಿಯಬೇಕು. ಪೂರ್ತಿ ನೀರನ್ನು ಒಂದೇ ಬಾರಿಗೆ ಕುಡಿಯಲು ಆರಂಭದಲ್ಲಿ ಕಷ್ಟವಾದಲ್ಲಿ ನಡುವೆ ಸ್ವಲ್ಪ ವಿರಾಮ ನೀಡಿ. ಇರುವ ಸ್ಥಳದಲ್ಲೇ ಸ್ವಲ್ಪ ನಡೆದಾಡಿ, ಸರಳ ಸುಲಭ ವ್ಯಾಯಾಮ ಮಾಡುತ್ತ ಉಳಿದ ನೀರನ್ನು ಕುಡಿಯಬಹುದು. ಆದರೆ ಕುಡಿಯುವ ನೀರು ಶುದ್ಧವಾಗಿದೆಯೆಂದು ಖಚಿತಪಡಿಸಿಕೊಳ್ಳುವುದನ್ನು ಯಾವುದೇ ಕಾರಣಕ್ಕೂ ಮರೆಯಬಾರದು. ಶುದ್ಧತೆಯ ಬಗ್ಗೆ ಅನುಮಾನ ಬಂದಲ್ಲಿ ಕುದಿಸಿ, ಆರಿಸಿದ ನೀರನ್ನು ಬಳಸುವುದು ಸೂಕ್ತ.

ಸುಮಾರು ಒಂದೂಕಾಲು ಲೀಟರ್ ನೀರನ್ನು ಕುಡಿದ ನಂತರ ಸುಮಾರು ೪೫ ನಿಮಿಷದಿಂದ ೧ ಗಂಟೆಯವರೆಗೆ ಬೇರೆ ಯಾವುದೇ ಪಾನೀಯವನ್ನಾಗಲೀ ಅಥವಾ ತಿನಿಸನ್ನಾಗಲೀ ಸೇವಿಸಬಾರದು. ಯಾವುದೇ ಮತ್ತು ಬರಿಸುವ ಪದಾರ್ಥ ಸೇವಿಸುವುದು ಆರೋಗ್ಯಕ್ಕೆ ಹಾನಿಕರ. ಇತರ ಯಾವುದೇ ಸಮಯದಲ್ಲಿ ಮದ್ಯ ಪದಾರ್ಥ ಸೇವನೆ ಸಮಂಜಸವಲ್ಲ.

ಜಲಚಿಕಿತ್ಸೆಯ ಆರಂಭಿಕ ದಿನಗಳಲ್ಲಿ ನೀರು ಕುಡಿದ ಒಂದು ಗಂಟೆಯೊಳಗೆ ಸುಮಾರು ೩-೪ ಬಾರಿ ಮೂತ್ರವಿಸರ್ಜನೆ ಮಾಡಬೇಕಾಗಬಹುದು. ಕೆಲವರಿಗೆ ಮತ್ತೆ ಮತ್ತೆ ಮೂತ್ರವಿಸರ್ಜನೆ ಮಾಡಬೇಕಾಗಬಹುದು.

* ನಿವೃತ್ತ ಗ್ರಂಥಪಾಲಕ, ಬೆಂಗಳೂರು ವಿಶ್ವವಿದ್ಯಾಲಯ.

ಆದರೆ ಕೆಲವೇ ದಿನಗಳಲ್ಲಿ ಎಲ್ಲವೂ ಸಾಮಾನ್ಯ ಸ್ಥಿತಿಗೆ ಮರಳುತ್ತದೆ. ಮತ್ತು ರೋಗ ಲಕ್ಷಣಗಳು ನಿಧಾನವಾಗಿ ಕಾಣೆಯಾಗಿ ಸಮಸ್ಯೆ ನಿಧಾನವಾಗಿ ಪರಿಹಾರಗೊಳ್ಳುತ್ತದೆ.

ಅರಿತ್ರೈಟಿಸ್ (ಕೀಲುನೋವು) ಮತ್ತು ರುಮಾಟಿಸಂ ರೋಗಗಳಿಂದ ನರಳುತ್ತಿರುವ ವ್ಯಕ್ತಿಗಳು ಒಂದು ವಾರ ದಿನಕ್ಕೆ ಮೂರು ಬಾರಿ ಈ ಜಲಚಿಕಿತ್ಸೆಯನ್ನು ಕೈಗೊಳ್ಳಬೇಕು. ಅನಂತರ ಇತರರಂತೆ ದಿನಕ್ಕೆ ಒಂದು ಬಾರಿ ಅಭ್ಯಾಸವನ್ನು ಮುಂದುವರಿಸಬೇಕು. ಇಂತಹ ಸಂದರ್ಭಗಳಲ್ಲಿ ಜಲಚಿಕಿತ್ಸೆ ಕೈಗೊಳ್ಳುವಾಗ ಊಟವಾದ ಎರಡು ಗಂಟೆಗಳ ನಂತರವಷ್ಟೇ ನೀರನ್ನು ಕುಡಿಯಬೇಕು. ಅದಕ್ಕಿಂತ ಮೊದಲು ನೀರು ಕುಡಿಯುವುದು ಸೂಕ್ತವಲ್ಲ.

ಈ ಚಿಕಿತ್ಸಾ ವಿಧಾನವನ್ನು ಅನುಸರಿಸಿದ ಬಾಲಕನೊಬ್ಬ ತನ್ನ ಅನುಭವವನ್ನು ಈ ರೀತಿ ಹಂಚಿಕೊಳ್ಳುತ್ತಾನೆ. "ನೀರನ್ನು ಕುಡಿದ ನಂತರ ನಾನು ಒಂದು ಗಂಟೆಯೊಳಗೆ ೩ ಬಾರಿ ಮೂತ್ರ ವಿಸರ್ಜನೆ ಮಾಡಿದೆ. ನಂತರ ಬೆಳಗಿನ ಉಪಹಾರ ಬಹಳ ರುಚಿಕರವೆನಿಸಿತು. ಮಲವಿಸರ್ಜನೆ ಆರಾಮದಾಯ ವೆನಿಸುವ ಜೊತೆಗೆ ಮಲ ಶೇಖರಣಾಂಗ ಮತ್ತು ವಿಸರ್ಜನಾಂಗ ಹಿಂದೆಂದಿಗಿಂತ ಆರಾಮದಾಯಕ ಎನಿಸಿತು. ೩ ತಿಂಗಳ ಅವಧಿಯಲ್ಲಿ ನನ್ನ ತೂಕ ಹೆಚ್ಚಿಸಿಕೊಂಡೆ. ವಾಟರ್ ಥೆರಪಿ ಆರಂಭಿಸಿದಂದಿನಿಂದ ನಾನೆಂದೂ ಖಾಯಿಲೆ ಬೀಳಲಿಲ್ಲ. ಅಷ್ಟೇ ಅಲ್ಲ ಶೀತ ಮತ್ತು ಕೆಮ್ಮು ಸಹ ನನ್ನ ಬಳಿ ಸುಳಿಯಲಿಲ್ಲ."

ವಾಟರ್ ಥೆರಪಿಯಿಂದ ಬೇರೆ ಬೇರೆ ರೋಗಗಳನ್ನು ಗುಣಪಡಿಸಬಹುದಾದ ಅವಧಿಯನ್ನು ಆಧಾರದ ಮೇಲೆ ಕಂಡುಕೊಳ್ಳಲಾಗಿದೆ. ಅವು ಈ ಕೆಳಗಿನಂತಿವೆ. ರಕ್ತದ ಒತ್ತಡ-ಒಂದು ತಿಂಗಳು, ಮಧುಮೇಹ-ಒಂದರಿಂದ ಎರಡು ವಾರ, ಗ್ಯಾಸ್ಟ್ರಿಕ್-ಒಂದು ವಾರ, ಮಲಬದ್ಧತೆ-ಒಂದರಿಂದ ಎರಡು ವಾರ.

ಹೀಗೆ ಹಲವು ದೈನಂದಿನ ರೋಗಗಳಿಗೆ ಜಲಚಿಕಿತ್ಸೆ ಅತ್ಯಂತ ಸರಳ ಮತ್ತು ಸುಲಭ ವಿಧಾನವಾದ್ದರಿಂದ ಎಲ್ಲ ವಯೋಮಾನದವರೂ ಅನುಸರಿಸಬಹುದು. ನಿಯಮಿತ ಅಭ್ಯಾಸವೊಂದೇ ವಾಟರ್ ಥೆರಪಿಗೆ ಅಗತ್ಯ ಪರಿಕರ ಆದ್ದರಿಂದ 'ನಿಯಮಿತವಾಗಿ ಶುದ್ಧನೀರು ಕುಡಿದು ಆರೋಗ್ಯ ಗಳಿಸಿ' ಎನ್ನುವುದು ಜಲಚಿಕಿತ್ಸೆಯ ಕುರಿತಾದ ಸುಲಭ ಘೋಷಣವಾಕ್ಯ. ತಡವೇಕೆ, ಸರಳ ಅಭ್ಯಾಸದಿಂದ ಉತ್ತಮ ಆರೋಗ್ಯದ ಬಾಗಿಲನ್ನು ನೀವೇ ತೆಗೆದುಕೊಳ್ಳಿ.

* * *

# ಆಧುನಿಕ ವಚನಗಳು

ದೀನದಲಿತರ ಕಲ್ಪವೃಕ್ಷವು ನೀವು
ಸಾಧು ಸಜ್ಜನರ ವಿಶ್ವಕುಟುಂಬಿಯು ನೀವು
ಸುಶಿಕ್ಷಿತರ ಅಮಲ ಆದರ್ಶವು ನೀವು
ಶೀಲವಂತರ ತವನಿಧಿಯು ನೀವು
ನೀತಿವಂತರ ಸುಗುಣಾಲಯವು ನೀವು
ಮಾನ್ಯವಂತರ ಉದಾರಚರಿತರು ನೀವು
ಆಶ್ರಿತರ ವಾತ್ಸಲ್ಯಸುಧಾಸಾಗರವು ನೀವು
ಇಂತಪ್ಪ ಸಕಲ ಮಾನವೀಯ ಗುಣಗಳ
ನಿಧಿಯು ನೀವಾಗಿ 'ಏಕೋ ಹಿ ಭುವನಶ್ಲಾಘ್ಯಃ'
ಭುವಿಯೊಳಗೆ ಶ್ಲಾಘ್ಯರಿವರೊಬ್ಬರೇ ಎಂಬ
ಕವಿವಾಣಿ ಹುಸಿಯೆ?
ಶಿವಗುರು ಶ್ರೀ ಶಿವಕುಮಾರ ಪ್ರಭುವೆ.

* * *

ಕರ್ನಾಟಕರತ್ನ ಪದ್ಮಭೂಷಣ
ಇಂತೆಲ್ಲ ಉಪಾಧಿಗಳ ತೊಡಿಸಿ ಕರೆವರಯ್ಯಾ
ಭಕ್ತರು
ಇಂತಿವೆಲ್ಲವೂ ಭಕ್ತರ ಉಪಾಧಿಯಲ್ಲದೆ
ಆಗಮದ ಉಪಾಧಿಯಲ್ಲ ನೋಡಾ
'ನಿರಂಜನ ಪ್ರಣವ ಸ್ವರೂಪಿ' ಎಂಬುದೇ ನಿಮ್ಮ
ನಿಜ ಉಪಾಧಿ
ಶಿವಗುರು ಶ್ರೀ ಶಿವಕುಮಾರ ಪ್ರಭುವೆ.

* * *

ನಿರಂಜನ ಎಂದಡೆ ಅಂಜನ ರಹಿತರು
ಅಂಜನವೆಂದಡೆ ಮಲತ್ರಯವು
ನಿರಂಜನ ಎಂದಡೆ ರಂಜನೆ ರಹಿತರು
ರಂಜನೆಯೆಂದಡೆ ಮಾಯಾರಂಜನೆಯು
ಪ್ರಣವ ಎಂದಡೆ ಓಂಕಾರವು
ಸ್ವರೂಪಿ ಎಂದಡೆ ಆ ಪ್ರಣವದ ಮೂರ್ತಿಯು
ಅದು ಕಾರಣ ನೀವು ನಿರಂಜನ ಪ್ರಣವ
ಸ್ವರೂಪಿಯು
ಇದು ಆಗಮದ ಅರ್ಥವು ನೋಡಾ
ಶಿವಗುರು ಶ್ರೀ ಶಿವಕುಮಾರ ಪ್ರಭುವೆ.

– ಕೋ.ರಂ. ಬಸವರಾಜು





# ಪೈ ಇಂಟರ್‌ನ್ಯಾಷನಲ್ ಕಂಪನಿಯಿಂದ ಶ್ರೀಮಠದ ವಿದ್ಯಾರ್ಥಿಗಳಿಗೆ ಉಚಿತ ನೋಟ್‌ಪುಸ್ತಕಗಳ ವಿತರಣೆ



"ಸದ್ದುಗದ್ದಲ ವಿರದೆ ಸಾಧನೆ ಇಲ್ಲಿ ಗದ್ದುಗೆಗೆ ಮೀರಿದೆ, ಕಾಯಕವೇ ಕೈಲಾಸ ವೆನ್ನುವ ಮಾತು ಕೃತಿಯೊಳು ಮೂಡಿದೆ". ಎಂಬ ರಾಷ್ಟ್ರಕವಿ ಡಾ॥ ಜಿ.ಎಸ್ ಶಿವರುದ್ರಪ್ಪನವರ ವಾಣಿಯಂತೆ ಶ್ರೀ ಸಿದ್ಧಗಂಗಾ ಮಠದಲ್ಲಿ ಕಳೆದ ೧೨ ವರ್ಷಗಳಿಂದ ಸದ್ದು ಗದ್ದಲವಿಲ್ಲದಂತೆ ಬೆಂಗಳೂರಿನ ಪೈ ಇಂಟರ್ ನ್ಯಾಷನಲ್ ಕಂಪನಿಯು ಶ್ರೀ ಮಠದ ವಿದ್ಯಾರ್ಥಿಗಳಿಗೆ ಉಚಿತ ನೋಟ್ ಪುಸ್ತಕಗಳನ್ನು ವಿತರಿಸುತ್ತಾ ಬಂದಿದೆ.

ಮಕ್ಕಳಿಗೆ ವೇದಿಕೆ ಮೇಲೆ ಶ್ರೀಗಳೊಂದಿಗೆ ಪೈ ಕುಟುಂಬವು ನೋಟ್ ಪುಸ್ತಕ ನೀಡುವ ಮೂಲಕ ಕಾರ್ಯಕ್ರಮದ ಉದ್ಘಾಟನೆಯನ್ನು ಮಾಡಿದರು. ಶ್ರೀ ರಾಜಕುಮಾರ್ ಪೈ ರವರು ತಮ್ಮ ಉದ್ಘಾಟನಾ ಭಾಷಣದಲ್ಲಿ "ಶ್ರೀ ಸಿದ್ಧಗಂಗಾ ಮಠ ನಾಡಿನ ಲಕ್ಷಾಂತರ ಬಡಮಕ್ಕಳಿಗೆ ಜ್ಞಾನದ ಬೆಳಕು, ಹಸಿದವರಿಗೆ ಅನ್ನ ನೀಡುವ ದೇವಾಲಯವಾಗಿದೆ. ಇಂಥಹ ಸುಕ್ಷೇತ್ರದಲ್ಲಿ ಕಲಿಯುತ್ತಿರುವ ಮಕ್ಕಳು ಶಿಕ್ಷಣ ಮುಗಿದ ನಂತರ ಎಲ್ಲಿಯೇ ಇರಲಿ, ಯಾವುದೇ ಕಾರ್ಯ ಮಾಡುತ್ತಿರಲಿ, ಶ್ರೀ ಮಠವನ್ನು ಮರೆಯದೇ, ಕೈಲಾದ ಸಹಾಯವನ್ನು ಮಾಡುವ ಮೂಲಕ, ಶ್ರೀಮಠದ ಋಣವನ್ನು ತೀರಿಸಿ, ಮತ್ತು ಶ್ರೀಮಠಕ್ಕೆ ಡಾ॥ ಶಿವಕುಮಾರ ಸ್ವಾಮೀಜಿಗೆ ಹಾಗೂ ನಿಮ್ಮ ತಂದೆ ತಾಯಿಗಳಿಗೆ ಗೌರವ ತರುವ ಕೆಲಸವನ್ನು ಮಾಡಿ, ಸಮಾಜದ ಏಳಿಗೆಗಾಗಿ ನಿರಂತರ ಕಾಯಕ ಜ್ಯೋತಿಯಾಗಿ, ದುಡಿಯುತ್ತಿರುವ, ಶ್ರೀಗಳನ್ನು ನಿಮ್ಮ ಆದರ್ಶವಾಗಿ ಇಟ್ಟುಕೊಂಡು ಈ ರಾಷ್ಟ್ರದ ಆಸ್ತಿಯಾಗಿ ದಿವ್ಯ ಜ್ಯೋತಿಗಳಾಗಿ ಪ್ರಜ್ವಲಿಸಬೇಕೆಂದು" ಕಿವಿಮಾತು ಹೇಳಿದರು.

ಕಾರ್ಯಕ್ರಮದ ದಿವ್ಯ ಸಾನ್ನಿಧ್ಯ ವಹಿಸಿದ್ದ, ಮಠಾಧ್ಯಕ್ಷರಾದ ಶ್ರೀ ಸಿದ್ಧಲಿಂಗ ಮಹಾ ಸ್ವಾಮೀಜಿಯವರು ಆಶೀರ್ವಚನವನ್ನು ನೀಡುತ್ತಾ "ಮನುಷ್ಯನಿಗೆ ಸಂತೋಷವಾಗುವುದು ಇನ್ನೊಬ್ಬರಿಗೆ ಒಳ್ಳೆಯದನ್ನು ಮಾಡಿದಾಗ ಮಾತ್ರ, ಇಂಥಹ ಕೈಂಕರ್ಯವನ್ನು ಕಳೆದ ೧೨ ವರ್ಷಗಳಿಂದ ಪೈ ಇಂಟರ್‌ನ್ಯಾಷನಲ್ ಕಂಪನಿಯ ಶ್ರೀ ರಾಜುಕುಮಾರ್ ಪೈರವರು, ಶ್ರೀ ಮಠದ ಎಲ್ಲಾ ವಿದ್ಯಾರ್ಥಿಗಳಿಗೆ ಉಚಿತವಾಗಿ ನೋಟ್ ಪುಸ್ತಕ ವಿತರಿಸುವ ಕಾರ್ಯದ ಮೂಲಕ ತಮ್ಮ ಬದುಕಿನಲ್ಲಿ, ಸಂತೋಷ ಕಂಡುಕೊಳ್ಳುತ್ತಿದ್ದಾರೆ. ಅವರಿಗೆ ಇನ್ನೂ ಹೆಚ್ಚಿನ ಸೇವೆ ಮಾಡುವ ಶಕ್ತಿಯನ್ನು, ದೇವರು ನೀಡಲಿ" ಎಂದು ಹಾರೈಸುತ್ತೇನೆ ಎಂದು ಹೇಳಿದರು. ತದನಂತರ ಪೈ ಕುಟುಂಬದವರಿಗೆ ಶಾಲು ಹಾರಗಳನ್ನು ನೀಡುವ ಮೂಲಕ ಆಶೀರ್ವದಿಸಿದರು.

ಈ ಸಮಾರಂಭದಲ್ಲಿ ಶ್ರೀ ಮಠದ ಸುಮಾರು ೧೫ಕ್ಕೂ ಹೆಚ್ಚು ಶಿಕ್ಷಣ ಸಂಸ್ಥೆಗಳ ೧೨ ಸಾವಿರಕ್ಕೂ ಹೆಚ್ಚು ಮಕ್ಕಳಿಗೆ ೨೦ ಲಕ್ಷರೂ ವೆಚ್ಚದ ೬೫ ಸಾವಿರ ನೋಟ್ ಪುಸ್ತಕಗಳನ್ನು ವಿವಿಧ ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ವಿತರಿಸಿದರು, ಇದೇ ಸಂದರ್ಭದಲ್ಲಿ ಶ್ರೀ ಮಠದ ಶಾಲೆಗಳಲ್ಲಿ ಓದಿ ೨೦೧೬-೧೭ ನೇ ಸಾಲಿನ ಎಸ್ ಎಸ್ ಎಲ್ ಸಿ ಪರೀಕ್ಷೆಯಲ್ಲಿ ಅತ್ಯುತ್ತಮ ಅಂಕ ಪಡೆದ ೦೪ ವಿದ್ಯಾರ್ಥಿಗಳಿಗೆ ತಲಾ ೫೦೦೦ರೂ ನಗದು ಪುರಸ್ಕಾರ ನೀಡಿ, ಗೌರವಿಸಲಾಯಿತು. ಈ ಕಾರ್ಯಕ್ರಮದಲ್ಲಿ ಕಿರಿ ಕೊಡ್ಲಿ ಮಠದ ಶ್ರೀ ಸದಾಶಿವ ಸ್ವಾಮಿಗಳು, ಅರಮೇರಿ ಶ್ರೀಗಳು, ಮತ್ತು ಪೈ ಸಂಸ್ಥೆಯ ಶ್ರೀ ಗುರುಪ್ರಸಾದ್ ಪೈ, ಶ್ರೀ ಉತ್ತಮ್ ಕುಮಾರ್ ಪೈ, ಶ್ರೀಮತಿ ಮೀನಾ ರಾಜಕುಮಾರ್ ಪೈ, ಜಯಶ್ರೀ ಪೈ, ಪುಷ್ಪ ಪೈ, ಶ್ರೀ ರಾಹುಲ್ ಪೈ, ಶ್ರೀ ರೋಹಿತ್, ಪೈ ಮತ್ತಿತರರು ಉಪಸ್ಥಿತರಿದ್ದರು. ಈ ಕಾರ್ಯಕ್ರಮದ ನಿರೂಪಣೆಯನ್ನು, ಶಿಕ್ಷಕರಾದ ಶ್ರೀ ಎಂ .ನಂದೀಶ್‌ರವರು ನಿರೂಪಿಸಿದರು. ಮು.ಶಿ. ಶ್ರೀ ಜಿ.ಹೆಚ್. ಗಂಗಾಧರಯ್ಯ ರವರು ಸ್ವಾಗತಿಸಿದರು.

ವರದಿ : ಸಿ. ಕುಮಾರಸ್ವಾಮಿ

ಶ್ರೀ ಸಿದ್ಧಗಂಗಾ ಮಠ, ತುಮಕೂರು

## ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ

ತಾವು ನೀಡುವ ಹಣಕ್ಕೆ ಆದಾಯ ತೆರಿಗೆ ಇಲಾಖೆಯಿಂದ ೮೦ಜಿ ಅಡಿಯಲ್ಲಿ ಶೇ. ೫೦ರವರೆಗೆ ತೆರಿಗೆ ವಿನಾಯಿತಿ ಇರುತ್ತದೆ.

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| 1722. | ಶ್ರೀ ಅಲಿಟ ಎಂಟರ್‌ಪ್ರೈಸಸ್<br>ಬೆಂಗಳೂರು | 5,000.00 |
| 1723. | ಶ್ರೀ ಕಾಳೇಗೌಡ<br>ಮಂಡ್ಯ | 1,000.00 |
| 1724. | ಶ್ರೀ ತುಳಸೀರಾಮಯ್ಯ<br>ಬೆಂಗಳೂರು | 50,000.00 |
| 1725. | ಶ್ರೀ ಎಂ.ಎಸ್. ರುದ್ರಪ್ಪ<br>ಬಳ್ಳಾರಿ | 1,000.00 |
| 1726. | ಶ್ರೀ ಪಿ. ಸರಸ್ವತಮ್ಮ,<br>ಪಿ. ರಾಜಗೋಪಾಲಯ್ಯ, ಪೆನುಚೂರಿ<br>ಲೇ. ಗೋರಂಟ್ಲ ವೆಂಕಟಲಕ್ಷ್ಮಿ, ಹಿಂದೂಪುರ<br>ಇವರ ಸ್ಮರಣಾರ್ಥ | 25,005.00 |
| 1727. | ಶ್ರೀ ಆರ್.ಎಸ್. ಹುಚ್ಚಾಚಾರಿ<br>ಬೆಂಗಳೂರು | 25,001.00 |
| 1728. | ಶ್ರೀ ಕರಿಸಿದ್ಧಯ್ಯ<br>ತಿಪಟೂರು | 1,000.00 |
| 1729. | ಶ್ರೀ ಹೆಚ್.ಡಿ. ಸೋಮಶೇಖರಯ್ಯ<br>ಹಿರೇಹಳ್ಳಿ | 23,725.00 |
| 1730. | ಶ್ರೀ ಕೆ.ಎನ್. ರೆಡ್ಡಿ<br>ಕೆ.ಜಿ.ಎಫ್ | 2,500.00 |
| 1731. | ಶ್ರೀ ಹೆಚ್.ಪಿ. ಸಂಗಪ್ಪ<br>ಹಾಡ್ಯ | 25,000.00 |
| 1732. | ಶ್ರೀ ಪುಟ್ಟಬುದ್ಧಿ<br>ಅಂಗಾರಪುರ | 1,000.00 |
| 1733. | ಶ್ರೀಮತಿ ಶಕುಂತಲ ಜಯದೇವ್<br>ಮೈಸೂರು | 2,000.00 |
| 1734. | ಶ್ರೀ ಬಸವರಾಜು ಶಂಕರಪ್ಪ ಬಿರೇದಾರ<br>ಅಲ್ಲುವಳ್ಳಿ | 1,000.00 |
| 1735. | ಶ್ರೀ ಎಂ. ವೇದಮೂರ್ತಿ<br>ಸಂತೇಮಾರಹಳ್ಳಿ | 1,001.00 |
| 1736. | ಶ್ರೀ ಪುನೀತ್<br>ಕನಕೇನಹಳ್ಳಿ | 1,000.00 |
| 1737. | ಶ್ರೀ ಡಿ.ವಿ. ಶಿವರುದ್ರಯ್ಯ<br>ಬೆಂಗಳೂರು | 40,150.00 |

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| 1738. | ಶ್ರೀ ಎನ್. ನಿರಂಜನಕುಮಾರ<br>ಮಜಿಗೆಕೆಂಪನಹಳ್ಳಿ | 1,000.00 |
| 1739. | ಶ್ರೀ ಕೃಷ್ಣಪ್ಪ<br>ನಂಗಪುರ | 2,000.00 |
| 1740. | ಶ್ರೀ ಎಂ. ಚಂದ್ರಶೇಖರಯ್ಯ<br>ಮಲ್ಲಪ್ಪನಹಳ್ಳಿ | 2,000.00 |
| 1741. | ಶ್ರೀ ಪಾರ್ವತಮ್ಮ ಮತ್ತು ಕುಟುಂಬ<br>ಕಡತನಮಲೆ | 10,110.00 |
| 1742. | ಶ್ರೀ ಎಲ್.ಪಿ. ವೆಂಕಟೇಶ್<br>ಬೆಂಗಳೂರು | 10,101.00 |
| 1743. | ಲೇ. ಕೆಂಚಮ್ಮ ಪಟೇಲ್ ಮಲ್ಲಪ್ಪ<br>ಶಾನುಭೋಗನಹಳ್ಳೀ | 5,101.00 |
| 1744. | ಶ್ರೀ ಎಂ.ಆರ್. ನಿಂಗಪ್ಪ<br>ಮಕುವಳ್ಳಿ | 1,000.00 |
| 1745. | ಶ್ರೀ ಎಂ.ಎ. ರಾಜಯ್ಯ<br>ಮೈಸೂರು | 500.00 |
| 1746. | ಶ್ರೀ ಎಸ್.ಪಿ. ಪುಟ್ಟಸ್ವಾಮಿ<br>ಸಂಪಿಗೆದಾಳು | 500.00 |
| 1747. | ಶ್ರೀ ಬಿ. ನಾಗರಾಜು<br>ಬೆಂಗಳೂರು | 1,000.00 |
| 1748. | ಶ್ರೀ ಹನುಮಂತಗೌಡ<br>ಮಲಕನಗೌಡ ಮಾನಗೌಡರು<br>ಚಲ್ಲಾಳು | 1,000.00 |
| 1749. | ಶ್ರೀ ಎ.ಎಸ್. ಅಜ್ಜಯ್ಯಸ್ವಾಮಿ ಎಸ್.<br>ಆರಾಧ್ಯಮಠ, ಅಳ್ಳದಗೆರೆ | 11,111.00 |
| 1750. | ಶ್ರೀ ಜೆ. ಪುರುಷೋತ್ತಮ<br>ಭಂಡ್ರಿ | 10,001.00 |
| 1754. | ಶ್ರೀ ಡಿ.ಎಸ್. ಭೋಜೇಗೌಡ<br>ದೇವವೃಂದ | 1,000.00 |
| 1755. | ಶ್ರೀ ಕಾಂತರಾಜು<br>ಲಕ್ಕರಸನಪಾಳ್ಯ | 500.00 |
| 1756. | ಶ್ರೀ ಜಿ. ಬರಮಪ್ಪ<br>ಶಿವಮೊಗ್ಗ | 1,000.00 |

RNI No. 17139/69 "Siddaganga" Monthly - Postal Reg. No. L2/RNP/385/TMR/2015-17



ರಾಮನಗರ ತಾ॥ ಮನಮಾನಹಳ್ಳಿ ಶ್ರೀ ಶಿವಕುಮಾರ ಸ್ವಾಮಿ ಗೋಶಾಲಾ ಸಂಘದ ವತಿಯಿಂದ ಹೊರತಂದಿರುವ ಕಾಮಧೇನು ಗೋ ಸಂರಕ್ಷಣಾ ಕಿರುಕೈಪಿಡಿಯನ್ನು ಪರಮಪೂಜ್ಯ ಶ್ರೀ ಶ್ರೀಗಳವರು ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಸಂಘದ ಪದಾಧಿಕಾರಿಗಳು ಉಪಸ್ಥಿತರಿದ್ದರು.



ಶ್ರೀಮಠದ ಪ್ರಾರ್ಥನಾ ಪುಸ್ತಕವನ್ನು ಪರಮಪೂಜ್ಯ ಶ್ರೀ ಶ್ರೀಗಳವರು ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಪುಸ್ತಕ ದಾಸೋಹಿಗಳಾದ ಶಿವ ಪೇಪರ್, ಹೊರಪೇಟೆ, ತುಮಕೂರು ಇದರ ಮಾಲೀಕರಾದ ಶ್ರೀ ರೇಣುಕಾಬಾಬು ಮತ್ತು ಕುಟುಂಬದವರು ಹಾಗೂ ಶ್ರೀ ಪಿ.ಎಸ್. ಚಂದ್ರಶೇಖರಯ್ಯ ಅವರು ಉಪಸ್ಥಿತರಿದ್ದರು.



ಶಿವಮೊಗ್ಗ ನಗರದಿಂದ ಆಗಮಿಸಿದ್ದ ೨ ಸಾವಿರಕ್ಕೂ ಹೆಚ್ಚು ಕೊಳಗೇರಿ ನಿವಾಸಿಗಳೊಂದಿಗೆ ವಿಧಾನ ಪರಿಷತ್ತಿನ ವಿರೋಧ ಪಕ್ಷದ ನಾಯಕರಾದ ಶ್ರೀ ಕೆ.ಎಸ್. ಈಶ್ವರಪ್ಪ ಮತ್ತು ಅವರ ಕುಟುಂಬದವರು ಶ್ರೀಮಠಕ್ಕೆ ಆಗಮಿಸಿ ಪೂಜ್ಯ ಶ್ರೀ ಶ್ರೀಗಳವರ ದರ್ಶನ ಮಾಡಿ ಆಶೀರ್ವಾದ ಪಡೆದರು.



ತುಮಕೂರಿನಲ್ಲಿ ಏರ್ಪಡಿಸಲಾಗಿದ್ದ ಖ್ಯಾತ ಗಾಯಕ ಶ್ರೀ ರಾಜೇಶ್ ಕೃಷ್ಣನ್‌ರವರಿಗೆ ಏರ್ಪಡಿಸಲಾಗಿದ್ದ ಅಭಿನಂದನಾ ಸಮಾರಂಭದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು, ಶ್ರೀ ಎಸ್. ನಾಗಣ್ಣ, ಕವಿ ಡಾ. ದೊಡ್ಡರಂಗೇಗೌಡ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ತುಮಕೂರಿನಲ್ಲಿರುವ ವಿಶಾಲಕ್ಷಮ್ಮ ಸಾದಶಿವಯ್ಯ ಸಭಾ ಭವನದಲ್ಲಿ ಪೂಜ್ಯ ಶ್ರೀ ಶ್ರೀ ಅಟವೀ ಶಿವಲಿಂಗ ಮಹಾಸ್ವಾಮಿಗಳವರ ವೀರಶೈವ ಲಿಂಗಾಯತ ಆತ್ಮತತ್ತ್ವ ಪ್ರವಚನ ಕಾರ್ಯಕ್ರಮದ ಉದ್ಘಾಟನೆಯನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಜ್ಯೋತಿ ಬೆಳಗಿಸಿ ನೆರವೇರಿಸಿದರು.




ಶ್ರೀ ಸಿದ್ಧಗಂಗಾ ಅಂಧಮಕ್ಕಳ ಪಾಠಶಾಲೆಯ ಪಠ್ಯೇತರ ಚಟುವಟಿಕೆಗಳು ಹಾಗೂ ಹೆಲನ್ ಕೇಲರ್ ಅವರ ೧೩೭ ಜನ್ಮದಿನ ದಿನಾಚರಣೆಯ ಕಾರ್ಯಕ್ರಮವನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಉದ್ಘಾಟಿಸಿದರು.

Cover printed at : Geetanjali Graphics, B-71, KSSIDC Indl. Area, 6th Block
email ID : geetanjaligraphics@gmail.com